ಪರಮದಯಾಮಯ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಕುಟುಂಬದಲ್ಲಿ ಹೆಣ್ಣಿನ ಪಾತ್ರವನ್ನು ಕೇಂದ್ರೀಕರಿಸಿ ರಚಿಸಲಾಗಿರುವ ಕೃತಿಯೇ ನಿಮ್ಮ ಕೈಯಲ್ಲಿರುವ 'ಸಂತೃಪ್ತ ಕುಟುಂಬ' ಎಂಬ ಈ ಕೃತಿ. ಗಂಡು ಹೆಣ್ಣಿನ ಮಿಲನ ದಿಂದಲೇ ಕುಟುಂಬ ಅಸ್ತಿತ್ವಕ್ಕೆ ಬರುತ್ತದೆ. ಗಂಡು-ಹೆಣ್ಣು ಜೀವನಗಾಡಿಯ ಎರಡು ಗಾಲಿಗಳಂತೆ. ಅವು ಎರಡೂ ಸರಿಯಾಗಿದ್ದರೆ ಜೀವನವು ಸುಗಮವಾಗಿರುವುದು. ಕುಟುಂಬದಲ್ಲಿ ಹೆಣ್ಣಿನ ವಿವಿಧ ಪಾತ್ರಗಳ ಬಗ್ಗೆ ಖ್ಯಾತ ಗ್ರಂಥಕರ್ತ ಶೇಖ್ ಮುಹಮ್ಮದ್ ಕಾರಕುನ್ನು ಮನೋಜ್ಞವಾಗಿ ವಿವರಿಸಿದ್ದಾರೆ.

ಮಹಿಳೆ ಪುರುಷನ ಜತೆಗಾರ್ತಿಯೇ ಹೊರತು ಆತನ ಗುಲಾಮಳಲ್ಲ. ಆತ ಯಜಮಾನನೂ ಅಲ್ಲ. ಇಬ್ಬರೂ ಕುಟುಂಬದಲ್ಲಿ ಸಮಾನ ಪಾತ್ರ ವಹಿಸುವವರು. ಮಹಿಳೆಯ ಸ್ಥಾನಮಾನದ ಕುರಿತು ಕುರ್‌ಆನ್ ಹದೀಸ್‌ಗಳ ಬೆಳಕಿನಲ್ಲಿ 'ಜೀವನ ಸಂಗಾತಿ' ಎಂಬ ಪ್ರಥಮ ಲೇಖನದಲ್ಲಿ ಸ್ಪಷ್ಟಪಡಿಸಲಾಗಿದೆ.

ತರುವಾಯ ಪತ್ನಿ, ತಾಯಿ, ಮಗಳು, ಅತ್ತೆ, ಸೊಸೆ, ನಾದಿನಿ ಎಂಬಿತ್ಯಾದಿ ವಿವಿಧ ಪಾತ್ರಗಳನ್ನು ಓರ್ವ ದೇವಭಕ್ತಳಾದ ಹೆಣ್ಣು ನಿಭಾಯಿಸಬಲ್ಲಳು ಎಂಬುದನ್ನು ಎಳೆ ಎಳೆಯಾಗಿ ಬಿಡಿಸಿ ಹೇಳಿದ್ದಾರೆ. ಈ ಎಲ್ಲ ಮಜಲುಗಳಲ್ಲೂ ಹೊಂದಿಕೊಂಡು ಬಾಳುವುದಾದರೆ ಅಂತಹ ಕುಟುಂಬ 'ಸಂತೃಪ್ತ ಕುಟುಂಬ'ವಾಗುವುದರಲ್ಲಿ ಸಂದೇಹ ವಿಲ್ಲವೆಂದು ಲೇಖಕರು ಪ್ರತಿಪಾದಿಸಿದ್ದಾರೆ. ಇದರ ಅಧ್ಯಯನವು ಎಲ್ಲ ಕುಟುಂಬಗಳಿಗೆ ಪ್ರಯೋಜನಕಾರಿಯಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ



a a a

# ಜೀವನ ಸಂಗಾತಿ

ಗ್ರಾಹಕ ಸಂಸ್ಕೃತಿಯ ಆಕ್ರಮಣದಿಂದ ತಪ್ಪಿಸಿಕೊಳ್ಳಲು ಹೆಚ್ಚಿನವರಿಗೆ ಸಾಧ್ಯವಾಗುವುದಿಲ್ಲ. ಗ್ರಾಹಕ ಸಂಸ್ಕೃತಿಯು ಎಲ್ಲವನ್ನೂ ವ್ಯಾಪಾರೀಕರಣಗೊಳಿಸಿದೆ. ಮಾನವ ಸಂಬಂಧಗಳೂ ಅದರಿಂದ ಮುಕ್ತವಾಗಿಲ್ಲ. ಎಲ್ಲ ಕಾರ್ಯಗಳನ್ನೂ ಕೂಡಿಸಿ ಕಳೆದು ಲಾಭ-ನಷ್ಟಗಳನ್ನು ನೋಡಿ ನಿರ್ಧರಿಸಲಾಗುವುದು. ಆಯ-ವ್ಯಯ, ಲಾಭ-ನಷ್ಟವನ್ನು ಗಮನಿಸದ ಯಾರೊಬ್ಬರೂ ಯಾವ ಕೆಲಸಕ್ಕೂ ಕೈ ಹಾಕದಂತಹ ಸ್ಥಿತಿಯಿದೆ. ಆದ್ದರಿಂದ ಇಂದು ಅಂಕೆಗಳೇ ಎಲ್ಲವನ್ನೂ ಆಳುತ್ತಿವೆ. ಜೀವನದಾದ್ಯಂತ ಆಧಾರ, ಆಶ್ರಯ, ಸಂಗಾತಿ, ಗೆಳತಿ, ಮಡದಿಯಾಗಿ ಜತೆಗಿರಬೇಕಾದ ಜೀವನ ಸಂಗಾತಿಯನ್ನೂ ವ್ಯಾಪಾರೀ ಮನಸ್ಸಿನಿಂದಲೇ ಆಯ್ಕೆ ಮಾಡಲಾಗುತ್ತಿದೆ. ಆದ್ದರಿಂದ ವಿವಾಹವೂ ವ್ಯಾಪಾರವಾಗಿ ಮಾರ್ಪಟ್ಟಿದೆ.

ಆದರೆ ಕುರ್‌ಆನಿನ ಕಲ್ಪನೆಯ ದಾಂಪತ್ಯಕ್ಕೆ ಪ್ರೀತಿ, ಕರುಣೆ ಮತ್ತು ವಾತ್ಸಲ್ಯ ಭಾವನೆಗಳೇ ಬುನಾದಿಯಾಗಿದೆ.

**"ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು ಸೃಷ್ಟಿಸಿ, ನೀವು ಅವರ ಬಳಿ ಪ್ರಶಾಂತಿಯನ್ನು ಪಡೆಯುವಂತೆ ಮಾಡಿದುದು ಮತ್ತು ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪವನ್ನುಂಟು ಮಾಡಿದುದೂ ಅವನ ನಿದರ್ಶನಗಳಲ್ಲೊಂದಾಗಿದೆ. ನಿಶ್ಚಯ ವಾಗಿಯೂ ವಿವೇಚಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ."**

**(ಪವಿತ್ರ ಕುರ್‌ಆನ್, 30:21)**

ಪ್ರೀತಿ ಎಂಬ ಪದವೇ ಸುಂದರ. ಅದು ಶ್ರೋತೃಗಳಲ್ಲಿ ಕುತೂಹಲ ಮೂಡಿಸುತ್ತದೆ. ಎಲ್ಲರೂ ಅದು ದೊರೆಯಬೇಕೆಂದು ಬಯಸುತ್ತಾರೆ. ಇತರರಿಗೆ ಪ್ರೀತಿಯನ್ನು ಕೊಡುಗೆ ನೀಡಲು ನಿರಾಕರಿಸುವವರೂ ಅದು ತಮಗೆ ದೊರೆಯಬೇಕೆಂದು ಬಯಸುತ್ತಾರೆ. ಪ್ರಾಣ ರಕ್ಷಣೆಗೆ ಕುಡಿಯುವ ನೀರು ಅನಿವಾರ್ಯವಾಗಿರುವಂತೆಯೇ ಸಾಮಾಜಿಕ ಸಂಬಂಧಗಳ ಉಳಿವಿಗೂ ಪ್ರೀತಿ ಅತ್ಯವಶ್ಯಕವಾಗಿದೆ.

ಪ್ರೀತಿಯು ಹೃದಯದ ಕವಾಟಗಳನ್ನು ತೆರೆಯುವ ಕೀಲಿಕೈಯಾಗಿದೆ. ಹರಿತವಾದ ಆಯುಧಗಳಿಂದ ಸೋಲಿಸಲಾಗದವರನ್ನು ಪ್ರೀತಿಯ ವರ್ತನೆಗಳಿಂದ ಮಣಿಸಲು ಸಾಧ್ಯವಿದೆ. ಪ್ರೀತಿಯ ಪ್ರಭಾವಕ್ಕೆ ಗಡಿಗಳಿಲ್ಲ. ಅದರ ಶಕ್ತಿಯು ಅತುಲ್ಯವಾಗಿದೆ.

ಹಲವು ವಸ್ತುಗಳು ವ್ಯಯಿಸಿದಾಗ ಕಡಿಮೆಯಾಗುತ್ತದೆ. ಆದರೆ ಪ್ರೀತಿಯ ಸ್ಥಿತಿಯು ತದ್ವಿರುದ್ಧವಾಗಿದೆ. ಅದು ಎಷ್ಟು ವ್ಯಯಿಸಿದರೂ ಕಡಿಮೆಯಾಗುವುದಿಲ್ಲ, ಹೆಚ್ಚುತ್ತದೆ. ಕೊಡುವುದಕ್ಕಿಂತ ಹೆಚ್ಚು ಮರಳಿ ದೊರೆಯುತ್ತದೆ. ಆದ್ದರಿಂದ ಹೆಚ್ಚು ಪ್ರೀತಿಯನ್ನು ಅತ್ತ ಕೊಡಬೇಕಾಗುತ್ತದೆ. ಅದಕ್ಕೆ ಅಪಾರ ಪ್ರೀತಿಯು ಮರಳಿ ದೊರೆಯುತ್ತಲಿರುತ್ತದೆ.

ಪ್ರೀತಿಗಾಗಿ ಸರ್ವಸ್ವವನ್ನೂ ಅರ್ಪಿಸಲು ಎಲ್ಲರೂ ಸಿದ್ಧರಾಗಿರುತ್ತಾರೆ. ಪ್ರೀತಿಸುವುದಕ್ಕಾಗಿ ಅರ್ಪಿಸುವ ಪರಿಶ್ರಮಗಳು ಯಾರಿಗೂ ಅರೋಚಕವೆನಿಸುವುದಿಲ್ಲ. ಅದರಿಂದ ಆತ್ಮಾನಂದ ಮತ್ತು ಆತ್ಮ ಸಂತೃಪ್ತಿಯುಂಟಾಗುತ್ತದೆ. ತನ್ನ ಮುದ್ದು ಹಸುಳೆಯು ರೋಗ ಪೀಡಿತವಾಗಿ ತಾಯಿಯು ಹಲವು ದಿನರಾತ್ರಿ ನಿದ್ದೆಗೆಟ್ಟರೂ ಆ ಬಗ್ಗೆ ಯಾರೊಡನೆಯೂ ದೂರುವುದಿಲ್ಲ. ಅದೇ ರೀತಿ ಮಗು ಗುಣಮುಖವಾದಾಗ ಅನುಭವಿಸುವ ನೆಮ್ಮದಿಯೂ ಅವರ್ಣನೀಯವಾಗಿದೆ.

ಅನುಕಂಪದ ಸ್ಥಿತಿಯೂ ಅಷ್ಟೇ. ಅದರ ಶಕ್ತಿಯು ಅಪಾರವಾಗಿದೆ. ಅದು ಮಾನವ ಸಂಬಂಧಗಳನ್ನು ಬಲವಾಗಿ ಜೋಡಿಸುವ ಕೊಂಡಿಯಾಗಿದೆ. ಅದು ಮಾನವ ಮನಸ್ಸಿನ ಅತಿ ಪವಿತ್ರ ಭಾವನೆಯೂ ಆಗಿದೆ. ಅದರ ಕೊರತೆಯಿಂದ ಮನಸ್ಸುಗಳು ಮರುಭೂಮಿಯಾಗಿ ಬಿಡುತ್ತವೆ.

ಮಾನವ ಮನಸ್ಸಿನ ಈ ಅತಿ ವಿಶಿಷ್ಟ ಪ್ರೀತಿವಾತ್ಸಲ್ಯದ ಭಾವನೆಯು ದಾಂಪತ್ಯದ ಬುನಾದಿಯಾಗಿರಬೇಕೆಂದು ಕುರ್‌ಆನ್ ಹೇಳುತ್ತದೆ. ಆದ್ದರಿಂದಲೇ ಲೌಕಿಕ ಮಾನ ದಂಡಗಳು ಅದಕ್ಕೆ ಅನ್ವಯವಾಗುವುದಿಲ್ಲ. ಗಣಿತಶಾಸ್ತ್ರದಲ್ಲಿ ಒಂದು ಮತ್ತು ಒಂದು ಕೂಡಿಸಿದರೆ ಎರಡು ಆಗುತ್ತದೆ. ಆದರೆ ಕುರ್‌ಆನಿನ ಕಲ್ಪನೆಯು ದಾಂಪತ್ಯ ಜಗತ್ತಿನಲ್ಲಿ ಅದು ಹಾಗಲ್ಲ. ಅಲ್ಲಿ ಅದು ಓರ್ವ ಖ್ಯಾತ ಸಾಹಿತಿಯು ಹೇಳಿರುವಂತೆ 'ಸ್ವಲ್ಪ ದೊಡ್ಡ ಒಂದು' ಆಗುತ್ತದೆ.

ದಾಂಪತ್ಯವು 2 ಜೀವಗಳು ಬೆರೆತು ಒಂದಾಗುವ ಅತ್ಯಂತ ಸೋಜಿಗದ ಪ್ರಕ್ರಿಯೆಯಾಗಿದೆ. ಎರಡು ಮಹಾ ಪ್ರವಾಹಗಳು ಸೇರಿ ನದಿಯಾಗುವಂತೆಯೇ ಇಬ್ಬರು ಜತೆ ಸೇರಿ ಒಂದೇ ಜೀವವಾಗಿ ಮಾರ್ಪಟ್ಟಾಗ ದಾಂಪತ್ಯವು ಕುರ್‌ಆನಿನ ವರ್ಣನೆಗೆ ಪೂರಕವಾಗುತ್ತದೆ. ಧರ್ಮಗ್ರಂಥ ದಂಪತಿಗಳನ್ನು ವಸ್ತ್ರಕ್ಕೆ ಹೋಲಿಸಿದೆಯಲ್ಲವೇ?

"ಅವರು ನಿಮಗೆ ಉಡುಪಾಗಿರುವರು ಮತ್ತು ನೀವು ಅವರಿಗೆ ಉಡುಪಾಗಿರುವಿರಿ."

(ಪವಿತ್ರ ಕುರ್‌ಆನ್, 2:187)

ದಂಪತಿಯರನ್ನು ಪರಿಚಯಪಡಿಸಲಿಕ್ಕಾಗಿ ಸಾಮಾನ್ಯವಾಗಿ ಗಂಡ-ಹೆಂಡತಿ ಎಂಬ ಪದವನ್ನು ಬಳಸಲಾಗುತ್ತದೆ. ಆದರೆ ಕುರ್‌ಆನ್ ಪರಿಚಯ ಪಡಿಸುವ ದಾಂಪತ್ಯದಲ್ಲಿ ಗಂಡ-ಹೆಂಡತಿಯಿಲ್ಲ. ಕೇವಲ ಜತೆಗಳಿವೆ.

"ನಿಮಗಾಗಿ ನಿಮ್ಮ ವರ್ಗದಿಂದಲೇ ಪತ್ನಿಯರನ್ನುಂಟು ಮಾಡಿದವನು ಅಲ್ಲಾಹನೇ. ಆ ಪತ್ನಿಯರಿಂದ ಅವನೇ ನಿಮಗೆ ಪುತ್ರರನ್ನೂ ಪೌತ್ರರನ್ನೂ ದಯಪಾಲಿಸಿದನು."

(ಪವಿತ್ರ ಕುರ್‌ಆನ್, 16:72)

"ಜನರೇ, ನೀವು ನಿಮ್ಮ ಪಾಲಕ ಪ್ರಭುವನ್ನು ಭಯಪಡಿರಿ. ಅವನು ನಿಮ್ಮನ್ನು ಒಂದು ಜೀವದಿಂದ ಸೃಷ್ಟಿಸಿದನು. ಅದೇ ಜೀವದಿಂದ ಅದರ ಜೋಡಿಯನ್ನು ಉಂಟು ಮಾಡಿದನು. ಮತ್ತು ಅವೆರಡರಿಂದ ಅನೇಕಾನೇಕ ಸ್ತ್ರೀ-ಪುರುಷರನ್ನು ಲೋಕದಲ್ಲಿ ಹಬ್ಬಿಸಿದನು." (ಪವಿತ್ರ ಕುರ್‌ಆನ್, 4:1)

ಗಂಡು, ದಮನಿಸಿ ಆಳುವವ, ಹೆಣ್ಣು ಅಂಧವಾಗಿ ಅನುಸರಿಸುವವಳು, ಆತ ಹೇಗೂ ಆಲೋಚಿಸಬಹುದು, ಏನನ್ನೂ ಹೇಳಬಹುದು, ಹೇಗೆ ಬೇಕಾದರೂ ವರ್ತಿಸಬಹುದು. ಆಕೆ ಎಲ್ಲವನ್ನೂ ಅಂಗೀಕರಿಸ ಬೇಕು, ನಿರ್ಲಿಪ್ತವಾಗಿ ಸಹಿಸಬೇಕು, ಪ್ರಶ್ನೆ ಕೇಳದೆ ಅನುಸರಿಸಬೇಕು, ಯಾವ ಅಭಿಪ್ರಾಯವನ್ನೂ ಹೇಳಬಾರದು. ಇಂಥ ಒರಟು, ಅನಾಗರಿಕ ಪುರುಷ ಪ್ರಭುತ್ವದ ನೀತಿಯನ್ನು ಕುರ್‌ಆನ್ ಅಂಗೀಕರಿಸುವುದಿಲ್ಲ ಅಥವಾ ಪುರುಷನು ಆಳುವ ಪತಿಯೂ ಸ್ತ್ರೀಯು ಆಳಲ್ಪಡುವ ಪತ್ನಿಯೂ ಅಲ್ಲ. ಬದಲಾಗಿ ಪರಸ್ಪರ ಪ್ರೀತಿಸಿ ಸಹಕರಿಸಿ, ಸಹಭಾಗಿಯಾಗಿ ಬಾಳಬೇಕಾದ ಜೋಡಿಗಳಾಗಿದ್ದಾರೆ. ಜೋಡಿಗಳೆಂಬ ಕುರ್‌ಆನ್ ಪ್ರಯೋಗವೇ ಅದು ಮುಂದಿರಿಸುವ ಜೀವನ ರೀತಿಯನ್ನು ಯಥಾಪ್ರಕಾರ ಪ್ರತಿನಿಧಿಸುತ್ತದೆ. ಪರಸ್ಪರರ ಹಕ್ಕುಬಾಧ್ಯತೆಗಳ ಅಂಗೀಕಾರದಿಂದ ಮಾತ್ರ ದಾಂಪತ್ಯವು ಸಾರ್ಥಕವಾಗುತ್ತದೆ. ಕುರ್‌ಆನ್ ಹೇಳುತ್ತದೆ:

"ಪುರುಷರಿಗೆ ಸ್ತ್ರೀಯರ ಮೇಲೆ ಹಕ್ಕಿರುವ ಹಾಗೆಯೇ ಸ್ತ್ರೀಯರಿಗೂ ಪುರುಷರ ಮೇಲೆ ನ್ಯಾಯೋಚಿತ ಹಕ್ಕು ಇದೆ." (ಪವಿತ್ರ ಕುರ್‌ಆನ್, 2:228)

ಜತೆಗಾರ್ತಿ, ಗೆಳತಿ, ಮಡದಿ ಎಂಬ ನೆಲೆಯಲ್ಲಿ ಸ್ತ್ರೀಯರಿಗೆ ಜೀವನ ಸಂಗಾತಿಯಿಂದ, ಕರುಣೆ, ಪ್ರೀತಿ, ವಾತ್ಸಲ್ಯದ ಸದ್ವರ್ತನೆ ದೊರೆಯಬೇಕೆಂದು ಕುರ್‌ಆನ್ ಕಲಿಸುತ್ತದೆ.

"ಸ್ತ್ರೀಯರೊಂದಿಗೆ ನೀವು ಉತ್ತಮ ರೀತಿಯಿಂದ ಜೀವನ ನಡೆಸಿರಿ. ಅವರು ನಿಮಗೆ ಅಪ್ರಿಯರಾಗಿದ್ದರೆ ಒಂದು ವಸ್ತುವು ನಿಮಗೆ ಅಪ್ರಿಯವಾಗಿದ್ದರೂ ಅಲ್ಲಾಹನು ಅದರಲ್ಲೇ ಅತಿ ಹೆಚ್ಚು ಒಳಿತನ್ನಿರಿಸಿರಲೂಬಹುದು." (ಪವಿತ್ರ ಕುರ್‌ಆನ್, 4:19)

ಪ್ರವಾದಿ(ಸ) ಹೇಳಿದರು, "ಪತ್ನಿಯೊಂದಿಗೆ ಉತ್ತಮವಾಗಿ ವರ್ತಿಸುವವರೇ ನಿಮ್ಮ ಪೈಕಿ ಅತ್ಯುತ್ತಮರು."

ಅವರು(ಸ) ಹೇಳಿದರು, "ಸಭ್ಯನಲ್ಲದೆ ಅವರನ್ನು ಗೌರವಿಸುವುದಿಲ್ಲ: ನೀಚನಲ್ಲದೆ ಅವರನ್ನು ನಿಂದಿಸುವುದಿಲ್ಲ."

ಪ್ರವಾದಿಯವರು(ಸ) ಅನುಯಾಯಿಗಳೊಡನೆ ಮತ್ತೊಮ್ಮೆ ಹೇಳಿದರು, "ಓರ್ವ ಸತ್ಯವಿಶ್ವಾಸಿಯು ವಿಶ್ವಾಸಿನಿಯನ್ನು ದ್ವೇಷಿಸಬಾರದು. ಆಕೆಯ ಒಂದು ಗುಣವು ಅಪ್ರಿಯವಾಗಿದ್ದರೆ ಇನ್ನೊಂದು ಪ್ರಿಯವಾಗಿರಬಹುದು." (ಮುಸ್ಲಿಮ್)

ര

# ಉತ್ತಮ ಗೃಹಿಣಿ: ಶಾಂತ ಮನೆ

ನಿಮ್ಮ ಕುಟುಂಬ ಹೇಗಿದೆ? ಸಂತೃಪ್ತವಾಗಿದೆಯೇ? ಇದನ್ನು ತಿಳಿಯಬೇಕಾದರೆ ಕುಟುಂಬದ ಸದಸ್ಯರು ತಮ್ಮ ಬಿಡುವಿನ ವೇಳೆಯನ್ನು ಎಲ್ಲಿ ವ್ಯಯಿಸುತ್ತಾರೆಂದು ನೋಡಬೇಕು. ನಿಮ್ಮ ಪತಿಯು ಕೆಲಸ ಮುಗಿದರೆ ನಿಮ್ಮ ಬಳಿಗೆ ಬರಲು ಅವಸರ ಪಡುತ್ತಾರೆಯೇ? ಬಿಡುವಿನ ವೇಳೆಯನ್ನು ಪೇಟೆ, ಅಂಗಡಿಗಳಲ್ಲಿ ಕಳೆಯುತ್ತಾರೆಯೇ ಅಥವಾ ನಿಮ್ಮ ಜತೆಯಲ್ಲಿ ಮನೆಯಲ್ಲಿಯೆ? ಅವರಿಗೆ ನಿಮ್ಮ ಜತೆಯಲ್ಲಿರುವಾಗ ಹೆಚ್ಚು ಶಾಂತಿ ನೆಮ್ಮದಿ ದೊರೆಯುವುದೋ ಅಥವಾ ತನ್ನ ಮಿತ್ರರ ಜತೆಯಲ್ಲಿ ಸಮಯ ಕಳೆಯುವಾಗಲೋ? ನಿಮ್ಮ ಪತಿ ಬಿಡುವಿನ ವೇಳೆಗಳಲ್ಲಿ ಮನೆಯ ಹೊರಗೆ ಉಳಿಯುವುದನ್ನು ಇಷ್ಟಪಡುವುದಿದ್ದರೆ ಅದಕ್ಕೆ ಕಾರಣವೇನು? ಅವರ ಆ ನಡವಳಿಕೆಯಲ್ಲಿ ನಿಮ್ಮ ಪಾತ್ರವಿದೆಯೇ? ನಿಮ್ಮ ಮುಖಭಾವಕ್ಕೆ, ಮಾತಿಗೆ, ನಿಲುಮೆಗೆ, ವರ್ತನೆಗೆ? ಅವರು ಮನೆಯಲ್ಲಿ ವಿಶ್ರಾಂತಿ ಪಡೆಯದೆ ಮಾರ್ಗದಲ್ಲಿಯೂ ಪೇಟೆಯಲ್ಲಿಯೂ ಸುತ್ತಾಡಿ ಮನೆಗೆ ಬಹಳ ತಡವಾಗಿ ಬರುವುದೇಕೆಂದು ಎಂದಾದರೂ ನೀವು ಆಲೋಚಿಸಿದ್ದೀರಾ? ಅದನ್ನು ಕೇವಲ ಅವರ ತಪ್ಪು ಮತ್ತು ದುರ್ಗುಣವೆಂದು ಯಾವಾಗಲೂ ದೂರುತ್ತಿರುವಿರಲ್ಲವೇ? ಅದರಲ್ಲಿ ನಿಮ್ಮ ಪಾತ್ರ ಇದೆಯೆಂದು ಎಂದಾದರೂ ನಿಮಗೆ ತೋಚಿದೆಯೇ? ಆ ಕುರಿತು ನೀವು ಆತ್ಮವಿಮರ್ಶೆ ನಡೆಸಿದ್ದೀರಾ?

ಕೆಲವು ಪುರುಷರು ಕೆಲಸ ಮುಗಿದ ಕೂಡಲೇ ಮನೆಗೆ ಮರಳಲು ತವಕಪಡದಿರುವುದಕ್ಕೆ ಕೇವಲ ಅವರ ದೋಷವೇ ಕಾರಣವಾಗಿರಲಾರದು. ಅವರಲ್ಲಿ ಆಸಕ್ತಿ ಹುಟ್ಟಿಸಲು ಗೃಹಿಣಿಗೆ ಸಾಧ್ಯವಾಗಿರಲಾರದು. ಮನೆಯಲ್ಲಿರುವವರು ಕಣ್ಮನ ತಣಿಸುವ ಮಾತು, ವರ್ತನೆಗಳನ್ನು ಹೊಂದಿದ್ದರೆ ಎಂಥ ಪುರುಷನೂ ಅವರ ಬಳಿಗೆ ತಲಪಲು ಹಾತೊರೆಯದಿರಲಾರನು. ಅಂಥ ಮಹಿಳೆಯರ ಸಾನ್ನಿಧ್ಯವು ಪ್ರತಿಯೊಂದು ಮನೆಗೂ ಅಲಂಕಾರವಾಗಿದೆ. ಅನುಗ್ರಹವಾಗಿದೆ. ಕಲ್ಲು ಹೃದಯಗಳ ಮೇಲೆಯೂ ಅವರು ಪ್ರಭಾವ ಬೀರಬಲ್ಲರು. ಆದ್ದರಿಂದಲೇ ಪ್ರವಾದಿಯವರು ಹೀಗೆ ಹೇಳಿದ್ದಾರೆ, "ಸತ್ಯವಿಶ್ವಾಸಿಗೆ ಅಲ್ಲಾಹನೊಂದಿಗಿನ ಭಯಭಕ್ತಿಯ ಬಳಿಕ ಸದ್ಗುಣ ಸಂಪನ್ನೆಯಾದ ಪತ್ನಿಯಿಂದ ಹೆಚ್ಚು ಪ್ರಯೋಜನ ದೊರೆಯುತ್ತದೆ. ಆಜ್ಞಾಪಿಸಿದರೆ ಅವಳು ಅದನ್ನು ಪಾಲಿಸುತ್ತಾಳೆ. ನೋಟದಲ್ಲಿ ಕುತೂಹಲ ಕೆರಳಿಸುತ್ತಾಳೆ. ಅವಳು ಯಾವುದಾದರೊಂದು ವಿಷಯದಲ್ಲಿ

ಶಪಥ ಹಾಕಿದರೆ ಅದನ್ನು ಈಡೇರಿಸುತ್ತಾಳೆ. ಪತಿಯ ಅನುಪಸ್ಥಿತಿಯಲ್ಲಿ ತನ್ನ ದೇಹ ಮತ್ತು ಆತನ ಸಂಪತ್ತಿನಲ್ಲಿ ಸಂಪೂರ್ಣ ಹಿತ ಬಯಸುತ್ತಾಳೆ." (ಇಬ್ನುಮಾಜ:)

ನಿಮ್ಮ ಜೀವನ ಸಂಗಾತಿ ನಿಮ್ಮ ಬಳಿಗೆ ಬಂದಾಗ ಹೆಚ್ಚು ಶಾಂತಿ ದೊರೆಯುವುದೋ ಅಥವಾ ಹೊರಗೆ ಹೋದಾಗಲೋ? ನೀವು ಅವರಿಗೆ ನೀಡುವುದು ಶಾಂತಿಯೋ ಅಶಾಂತಿಯೋ? ನೆಮ್ಮದಿಯೋ ಕಳವಳವೋ?

ಜೀವನದ ಜಟಿಲ ಪರಿಸ್ಥಿತಿಗಳಲ್ಲಿ ವ್ಯವಹರಿಸಿ ಬಳಲಿ, ಖಿನ್ನರಾಗಿ ಮರಳುವ ಜೀವನ ಸಂಗಾತಿಗೆ, ಶಾಂತಿ ನೆಮ್ಮದಿಯನ್ನು ನೀಡಲು ನಿಮಗೆ ಸಾಧ್ಯವಾಗುತ್ತಿದೆಯೇ? ಪ್ರತಿಯೊಬ್ಬರಿಗೂ ಮನಃಶಾಂತಿ ಅತ್ಯವಶ್ಯಕವಾಗಿದೆ. ಹಣ, ಸ್ಥಾನಮಾನ, ಜೀವನ ಸೌಲಭ್ಯ ಅಥವಾ ಲೌಕಿಕ ಸಂಪನ್ಮೂಲಗಳಿಂದ ಅದು ದೊರೆಯುವುದಿಲ್ಲ. ಮನಃ ಶಾಂತಿಯು ಅತ್ಯಮೂಲ್ಯವಾಗಿದೆ. ಆದ್ದರಿಂದಲೇ ಅದನ್ನು ಒದಗಿಸುವುದೇ ಮಹಾನ್ ಸೇವೆಯಾಗಿದೆ. ತನ್ನ ಜೀವನ ಸಂಗಾತಿಗೆ ಶಾಂತಿ ನೀಡುವುದೇ ಓರ್ವ ಹೆಣ್ಣಿನ ನೈಜ ಕಾರ್ಯಭಾರವಾಗಿದೆ. ಅಲ್ಲಾಹನು ತಿಳಿಸಿರುತ್ತಾನೆ.

**"ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು ಸೃಷ್ಟಿಸಿ, ನೀವು ಅವರ ಬಳಿ ಪ್ರಶಾಂತಿಯನ್ನು ಪಡೆಯುವಂತೆ ಮಾಡಿದುದು." (ಪವಿತ್ರ ಕುರ್‌ಆನ್, 30:21)**

ನೀವು ವಾಸವಾಗಿರುವ ಮನೆಗೆ ಅರಬಿಯಲ್ಲಿ 'ಮಸ್ಕನ್' ಎನ್ನಲಾಗುತ್ತದೆ. ಶಾಂತಿ(ಸುಕೂನ್) ಒದಗಿಸಲು ನೀವು ಇರುವುದರಿಂದಲೇ ಮನೆಯು 'ಶಾಂತಿ ನಿಕೇತನ'(ಮಸ್ಕನ್). ಆಗುತ್ತದೆ.

ಕಳೆದ ಒಂದು ವರ್ಷದಲ್ಲಿ ನಿಮ್ಮ ಪತಿಯು ನಿಮ್ಮೊಂದಿಗೆ ಎಂದಾದರೂ ಕೋಪಿಸಿದ್ದಾರೆಯೇ? ಹಾಗಿದ್ದರೆ ಎಷ್ಟು ಬಾರಿ? ಅದನ್ನು ಜ್ಞಾಪಿಸಲು ಕಷ್ಟವಿದ್ದರೆ ಕಳೆದ ಒಂದು ತಿಂಗಳಲ್ಲಿ ಎಷ್ಟು ಬಾರಿ ಕೋಪಿಸಿದ್ದಾರೆ? ನೀವು ಸ್ವಲ್ಪ ಗಮನಿಸಿದ್ದರೆ ನಿಮಗೆ ಅದನ್ನು ಕೋಪಿಸಿದಾಗ ನೀವು ಹೇಗೆ ಪ್ರತಿಕ್ರಿಯಿಸುತ್ತೀರಿ? ನೀವೂ ಅದೇ ರೀತಿ ಕೋಪಿಸುತ್ತೀರಾ? ಆ ಮೂಲಕ ಅವರ ಕೋಪವು ಎಂದಾದರೂ ಶಮನ ವಾಗಿದೆಯೇ? ಅದೇ ವೇಳೆ, ಪತಿಯು ಕೋಪಿಸಿದಾಗ ನೀವು ತಾಳ್ಮೆ ವಹಿಸಿ ಅದನ್ನು ಮುಗುಳ್ನಗೆಯಿಂದ ಎಂದಾದರೂ ಎದುರಿಸಿದ್ದೀರಾ? ಆಗ ಅದರ ಪರಿಣಾಮವೇನಾಗಿತ್ತು? ತಿಳಿದಿರಲಿ, ಬೆಂಕಿಯಿಂದ ಬೆಂಕಿಯನ್ನು ನಂದಿಸಲಾಗುವುದಿಲ್ಲ. ಕೋಪವನ್ನು ಕೋಪ ದಿಂದ ತಣಿಸಲು ಸಾಧ್ಯವಿಲ್ಲ. ನಿಮ್ಮ ಪತಿಯ ಕೋಪ ಸ್ವಭಾವವನ್ನು ಬದಲಿಸಲು ನೀವು ಮನಃಪೂರ್ವಕ ಪ್ರಯತ್ನಿಸಿದ್ದೀರಾ? ಕೋಪಕ್ಕೆ ಅವಕಾಶ ನೀಡದೆ ಪ್ರೀತಿಯನ್ನು ತೋರಿಸಲು ನಿಮ್ಮಿಂದ ಸಾಧ್ಯವಿಲ್ಲವೇ? ಪತಿಯ ಕೋಪವನ್ನು ಏಳೆಂಟು ಬಾರಿ ತಾಳ್ಮೆಯಿಂದ ಎದುರಿಸಿದರೆ ಅನಂತರ ಅವರು ನಿಮ್ಮೊಂದಿಗೆ ಸಿಟ್ಟಾಗಲಾರರು. ನೀರು ಬೆಂಕಿಯನ್ನು ನಂದಿಸುವಂತೆ ನಿಮಗೆ ಜೀವನ ಸಂಗಾತಿಯ ಕೋಪವನ್ನು ತಣಿಸಲು ಸಾಧ್ಯವಿದೆ. ಅದಕ್ಕೆ ಮನಃಪೂರ್ವಕ ಪ್ರಯತ್ನಿಸಬೇಕು.

ಜೀವನ ಸಂಗಾತಿಯಿಂದ ಅಹಿತಕರ ಮಾತು ಅಥವಾ ವರ್ತನೆಯು ಕಂಡು ಬಂದರೆ ನೀವೇನು ಮಾಡುತ್ತೀರಿ? ಪ್ರೀತಿ ಮತ್ತು ತಾಳ್ಮೆಯಿಂದ ಅದನ್ನು ಎದುರಿಸುತ್ತೀರಾ ಅಥವಾ ಕೋಪಿಸುತ್ತೀರಾ? ನೀವು ಕಳೆದ ಒಂದು ವರ್ಷದಲ್ಲಿ ಪತಿಯೊಡನೆ ಎಷ್ಟು ಬಾರಿ ಸಿಟ್ಟಾಗಿದ್ದೀರಿ? ಸ್ವಲ್ಪ ಎಚ್ಚರ ವಹಿಸಿದ್ದರೆ ಅವುಗಳ ಸಂಖ್ಯೆಯನ್ನಾದರೂ ಕಡಿಮೆ ಗೊಳಿಸಬಹುದಾಗಿತ್ತಲ್ಲವೇ? ಕೋಪದಿಂದ ಎಂದಾದರೂ ನಿಮ್ಮ ಪತಿಯನ್ನು ಮಣಿಸಲು ನಿಮ್ಮಿಂದ ಸಾಧ್ಯವಾಗಿದೆಯೇ? ಆ ಮೂಲಕ ನಿಮ್ಮೊಂದಿಗಿನ ಪ್ರೀತಿ ವಾತ್ಸಲ್ಯ ಹೆಚ್ಚು ಅಥವಾ ಕಡಿಮೆಯಾಗಿದೆಯೇ? ಕೋಪ ಮತ್ತು ದ್ವೇಷವು ಪರಸ್ಪರರನ್ನು ದೂರಗೊಳಿಸು ವುದಿಲ್ಲವೇ? ಹಾಗಾದರೆ ಯಾವುದೇ ಪ್ರಯೋಜನವಿಲ್ಲದೆ ಕೇವಲ ಹಾನಿಕಾರಕವಾದ ಸಿಟ್ಟನ್ನು ತೊರೆಯಲು ಮನಃಪೂರ್ವಕ ಯಾಕೆ ಪ್ರಯತ್ನಿಸಬಾರದು? ದೃಢ ನಿಶ್ಚಯ ಮತ್ತು ನಿರಂತರ ತರಬೇತಿಯಿಂದ ಅದನ್ನು ಸಾಧಿಸಬಹುದು.

ತಿಳಿದಿರಲಿ, ಕೋಪದ ನಿಯಂತ್ರಣವು ಶ್ರೇಷ್ಠ ಪುಣ್ಯ ಕರ್ಮವಾಗಿದೆ. ಈ ಲೋಕದಲ್ಲಿ ತುಂಬಾ ಲಾಭದಾಯಕ ಮತ್ತು ಪರಲೋಕದಲ್ಲಿ ತುಂಬಾ ಪ್ರತಿಫಲಾರ್ಹವೂ ಆಗಿದೆ. ಅಲ್ಲಾಹನು ಹೇಳಿರುತ್ತಾನೆ.

"ಅವರು ಸ್ಥಿತಿವಂತರಾಗಿರುವಾಗಲೂ ದುಸ್ಥಿತಿಯಲ್ಲಿರುವಾಗಲೂ ತಮ್ಮ ಸಂಪತ್ತನ್ನು ಖರ್ಚು ಮಾಡುತ್ತಾರೆ, ಕೋಪವನ್ನು ನುಂಗಿಕೊಳ್ಳುತ್ತಾರೆ ಮತ್ತು ಇತರರ ಅಪರಾಧ ಗಳನ್ನು ಕ್ಷಮಿಸುತ್ತಾರೆ. ಇಂತಹ ಸಜ್ಜನರು ಅಲ್ಲಾಹನಿಗೆ ಅತ್ಯಂತ ಮೆಚ್ಚುಗೆಯವರು." (ಪವಿತ್ರ ಕುರ್‌ಆನ್, 3:134)

"ಅವರನ್ನು ಕ್ಷಮಿಸಿ ಬಿಡಬೇಕು ಮತ್ತು ಮನ್ನಿಸಬೇಕು. ಅಲ್ಲಾಹನು ನಿಮ್ಮನ್ನು ಕ್ಷಮಿಸಬೇಕೆಂದು ನೀವು ಇಚ್ಛಿಸುವುದಿಲ್ಲವೇ?" (ಪವಿತ್ರ ಕುರ್‌ಆನ್, 24:22)

# ಮುದ್ದಿನ ಸೊಸೆ

ನಿಮ್ಮ ಪತಿಯು ನಿಮ್ಮನ್ನು ಹೆಚ್ಚಾಗಿ ಗಮನಿಸುತ್ತಾರೆಯೇ ಅಥವಾ ತನ್ನ ತಾಯಿಯನ್ನೇ? ಪ್ರಥಮ ಗಮನವು ನಿಮಗೆ ದೊರೆಯಬೇಕೆಂದು ನೀವು ಆಸೆಪಡುತ್ತೀರಾ? ನಿಮಗಿಂತ ನಿಮ್ಮ ಅತ್ತೆಗೆ ಮಹತ್ವ ನೀಡುವುದರಿಂದ ನಿಮಗೆ ಅಸಮಾಧಾನವಾಗುವುದೇ? ಅಥವಾ ನಿಮಗೆ ಸಂತೋಷವಾಗುವುದೇ? ಪತಿಯೊಡನೆ ಅವರ ತಾಯಿಯ ಕುರಿತು ಎಂದಾದರೂ ದೂರಿದ್ದೀರಾ? ಅವರಿಗೆ ತಾಯಿಯೊಂದಿಗಿರುವ ಪ್ರೀತಿ ಮತ್ತು ಒಲವನ್ನು ಹೆಚ್ಚಿಸಲು ಪ್ರಯತ್ನಿಸುತ್ತೀರಾ ಅಥವಾ ಕಡಿಮೆಗೊಳಿಸಲೋ? ನಿಮ್ಮ ಪತಿಯನ್ನು ಅವರ ತಾಯಿಯಿಂದ ದೂರಗೊಳಿಸಲು ಎಂದಾದರೂ ಪ್ರಯತ್ನಿಸಿದ್ದೀರಾ?

ನಿಮ್ಮ ಪತಿಗೆ ಈ ಲೋಕದಲ್ಲಿ ಅತ್ಯಧಿಕ ಋಣ ಭಾರವಿರುವುದು ಅವರ ತಾಯಿಯೊಂದಿಗೆ ಎಂಬುದು ನಿಮಗೆ ತಿಳಿದಿದೆಯೇ? ಅದಕ್ಕೆ ಸಂಬಂಧಿಸಿದ ಕುರ್‌ಆನ್ ವಚನ ಮತ್ತು ಪ್ರವಾದಿ ನುಡಿಯನ್ನು ನೀವು ಜ್ಞಾಪಿಸುತ್ತೀರಾ? ಪತಿಗೆ ಅವರ ತಾಯಿಯೊಂದಿಗೆ ಪ್ರೀತ್ಯಾದರವನ್ನು ಕಡಿಮೆಗೊಳಿಸುವ ಮೂಲಕ ನೀವು ಅವರನ್ನು ನರಕಕ್ಕೆ ದೂಡುತ್ತಿರುವಿರೆಂದು ನಿಮಗೆ ಅನಿಸುತ್ತಿದೆಯೇ?

ಅಲ್ಲಾಹ್ ಮತ್ತು ಆತನ ಪ್ರವಾದಿಯ ಆಜ್ಞೆಗಳನ್ನು ಮರೆಯದಿರಿ. ಪತಿಯನ್ನು ಅವರ ತಾಯಿಯಿಂದ ದೂರಗೊಳಿಸಿದರೆ ಆ ಮೂಲಕ ನೀವು ನಿಮ್ಮ ಜೀವನ ಸಂಗಾತಿಯನ್ನು ನರಕಕ್ಕೆ ದೂಡುತ್ತೀರಿ. ಜತೆಯಲ್ಲಿ ನೀವೂ ಅದರಲ್ಲಿ ಬೀಳಲು ಕಾರಣವಾಗಬಹುದು. ಅಲ್ಲಾಹನು ಹೇಳಿದ್ದಾನೆ:

"ನಿಮ್ಮ ಪ್ರಭು (ಹೀಗೆ) ವಿಧಿಸಿಬಿಟ್ಟಿದ್ದಾನೆ; ನೀವು ಕೇವಲ ಅವನೊಬ್ಬನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬಾರದು. ಮಾತಾಪಿತರೊಡನೆ ಸೌಜನ್ಯದಿಂದ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಅವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿದ್ದರೆ, ಅವರ ಬಗ್ಗೆ ಚಕಾರವೆತ್ತಬೇಡಿರಿ ಮತ್ತು ಅವರನ್ನು ಜರೆಯಬೇಡಿರಿ. ಅವರೊಂದಿಗೆ ಗೌರವಪೂರ್ವಕವಾಗಿ ಮಾತನಾಡಿರಿ. ನಯ ವಿನಯ ಮತ್ತು ಕರುಣೆಯೊಂದಿಗೆ ಅವರ ಮುಂದೆ ಬಾಗಿಕೊಂಡಿರಿ. "ಓ ನನ್ನ ಪ್ರಭೂ! ಇವರು ನನ್ನ ಚಿಕ್ಕಂದಿನಲ್ಲಿ ದಯಾ ವಾತ್ಸಲ್ಯಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ಮೇಲೆ ಕೃಪೆತೋರು" ಎಂದು ಪ್ರಾರ್ಥಿಸಿರಿ." (ಪವಿತ್ರ ಕುರ್‌ಆನ್, 17:23-24)

"ನೀವೆಲ್ಲರೂ ಅಲ್ಲಾಹನ ದಾಸ್ಯಾರಾಧನೆ ಮಾಡಿರಿ. ಆತನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಿರಿ."

"ಓ ಪೈಗಂಬರರೇ, ನೀವು ಅವರೊಡನೆ ಹೇಳಿರಿ: ಬನ್ನಿರಿ ನಿಮ್ಮ ಪ್ರಭು ನಿಮ್ಮ ಮೇಲೆ ಯಾವ ನಿರ್ಬಂಧಗಳನ್ನು ಹೊರಿಸಿರುತ್ತಾನೆಂಬುದನ್ನು ನಾನು ತಿಳಿಸುವೆನು. ಅವನೊಂದಿಗೆ ಯಾವುದನ್ನೂ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತರೊಂದಿಗೆ ಸೌಜನ್ಯದೊಂದಿಗೆ ವರ್ತಿಸಿರಿ. " (ಪವಿತ್ರ ಕುರ್‌ಆನ್, 6:151)

ಈ ಮೂರು ಕಡೆಗಳಲ್ಲಿಯೂ ಅಲ್ಲಾಹನು ತಂದೆ ತಾಯಿಗಳೊಂದಿಗಿನ ಕರ್ತವ್ಯವನ್ನು ತನ್ನೊಂದಿಗಿನ ಕರ್ತವ್ಯದ ಜತೆ ಸೇರಿಸಿ ಹೇಳಿರುವುದು ವಿಶೇಷ ಗಮನಾರ್ಹ ವಾಗಿದೆ. ತರುವಾಯ ತನಗೆ ಕೃತಜ್ಞತೆ ತೋರಿಸುವಂತೆಯೇ ತಂದೆ ತಾಯಿಯವರಿಗೂ ಕೃತಜ್ಞತೆ ತೋರಿಸಬೇಕೆಂದು ಅಲ್ಲಾಹನು ಆಜ್ಞಾಪಿಸಿದ್ದಾನೆ:

"ಮಾನವನಿಗೆ ತನ್ನ ಮಾತಾಪಿತರ ಹಕ್ಕನ್ನು ತಿಳಿದುಕೊಳ್ಳಲು ನಾವೇ ತಾಕೀತು ಮಾಡಿರುತ್ತೇವೆ. ಅವನ ತಾಯಿಯು ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿ ಅವನನ್ನು ತನ್ನ ಗರ್ಭದಲ್ಲಿರಿಸಿದಳು ಮತ್ತು ಅವನ ಸ್ತನಪಾನ ಬಿಡುವುದರಲ್ಲಿ ಎರಡು ವರ್ಷಗಳು ತಗಲಿದುವು. (ಆದುದರಿಂದಲೇ ನಾವು ಅವನೊಡನೆ) ನನಗೆ ಕೃತಜ್ಞತೆ ಸಲ್ಲಿಸು ಮತ್ತು ನಿನ್ನ ಮಾತಾಪಿತರಿಗೆ ಕೃತಜ್ಞತೆ ಸಲ್ಲಿಸು. ನೀನು ನನ್ನ ಕಡೆಗೇ ಮರಳಬೇಕಾಗಿದೆ (ಎಂದು ಉಪದೇಶಿಸಿದೆವು)." (ಪವಿತ್ರ ಕುರ್‌ಆನ್, 31:14)

"ತನ್ನ ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದು ನಾವು ಮಾನವನಿಗೆ ಆದೇಶಿಸಿದೆವು. ಅವನ ತಾಯಿಯು ಬಹಳ ಕಷ್ಟಪಟ್ಟು ಅವನನ್ನು ಗರ್ಭದಲ್ಲಿರಿಸಿದಳು ಮತ್ತು ಕಷ್ಟಪಟ್ಟೇ ಅವನನ್ನು ಹೆತ್ತಳು. ಅವನ ಗರ್ಭಾವಧಿಯಲ್ಲಿ ಮತ್ತು ಮೊಲೆಹಾಲು ಬಿಡಿಸುವುದರಲ್ಲಿ ಮೂವತ್ತು ತಿಂಗಳುಗಳು ತಗಲಿದವು."(ಪವಿತ್ರ ಕುರ್‌ಆನ್, 46:15)

ಪ್ರವಾದಿ(ಸ) ಹೇಳಿದ್ದಾರೆ, "ಅಲ್ಲಾಹನ ತೃಪ್ತಿಯು ತಂದೆ ತಾಯಿಯ ತೃಪ್ತಿಯಲ್ಲಿದೆ. ಅಲ್ಲಾಹನ ಕೋಪವು ಅವರ ಕೋಪದಲ್ಲಿದೆ." (ಹಾಕಿಮ್)

ಓರ್ವರು ಪ್ರವಾದಿಯವರೊಡನೆ(ಸ) ತಂದೆ ತಾಯಿಯರ ಕುರಿತು ಕೇಳಿದರು. ಪ್ರವಾದಿವರ್ಯರು(ಸ) ಹೇಳಿದರು, "ಅವರು ನಿನ್ನ ಸ್ವರ್ಗ ಮತ್ತು ನರಕವಾಗಿದ್ದಾರೆ."

(ಇಬ್ನುಮಾಜಃ)

"ಪ್ರಾಯಾಧಿಕ್ಯವಿರುವ ತಂದೆ ತಾಯಿ ಅಥವಾ ಆ ವ್ಯಕ್ತಿ ಓರ್ವರು ದೊರೆತಿದ್ದರೂ ಸ್ವರ್ಗ ಗಳಿಸಲಾಗದವನಿಗೆ ವಿನಾಶವಿರಲಿ. ಅವನಿಗೆ ಸೋಲು, ಅವನೇ ನತದೃಷ್ಟ."

(ಮುಸ್ಲಿಮ್)

ಇಬ್ನು ಅಬ್ಬಾಸ್‌ರಿಂದ ವರದಿಯಾಗಿದೆ- ಪ್ರವಾದಿ(ಸ) ಹೇಳಿದರು, "ಯಾರಾದರೂ ಅಲ್ಲಾಹನ ಪ್ರೀತಿಯನ್ನು ಬಯಸಿ ತಂದೆ ತಾಯಿಗೆ ಒಳಿತು ಮಾಡಲು ಮತ್ತು

ಸೇವೆಗೈಯಲು ಸಮಯ ವ್ಯಯಿಸಿದರೆ ಸ್ವರ್ಗದ ಎರಡು ಕವಾಟಗಳನ್ನು ಆತನಿಗಾಗಿ ತೆರೆಯಲಾಗುತ್ತದೆ." ಪ್ರವಾದಿಯವರ(ಸ) ಅನುಯಾಯಿಯೋರ್ವರು ಕೇಳಿದರು, "ತಂದೆ ತಾಯಂದಿರು ಕ್ರೂರವಾಗಿ ವರ್ತಿಸುವವರಾಗಿದ್ದರೆ?" "ಹೌದು, ಅವರು ಕ್ರೂರವಾಗಿ ವರ್ತಿಸಿದರೂ ನೀನು ಅವರೊಡನೆ 'ಛೆ' ಎಂದೂ ಹೇಳಬಾರದು" ಪ್ರವಾದಿ ಉತ್ತರಿಸಿದರು.

ಅಬೂ ಹುರೈರಾರಿಂದ ವರದಿಯಾಗಿದೆ- ಓರ್ವರು ಪ್ರವಾದಿಯವರ(ಸ) ಬಳಿ ಬಂದು ಕೇಳಿದರು, "ಅಲ್ಲಾಹನ ಪ್ರವಾದಿಗಳೇ, ನನ್ನ ಅತ್ಯುತ್ತಮ ವರ್ತನೆಗೆ ಯಾರು ಅರ್ಹರು?" ಪ್ರವಾದಿ(ಸ) ಹೇಳಿದರು, "ನಿನ್ನ ತಾಯಿ" ಅವರು ಪುನಃ ಕೇಳಿದರು, "ಆ ಬಳಿಕ ಯಾರು?" ಪ್ರವಾದಿ ಹೇಳಿದರು, "ನಿನ್ನ ತಾಯಿ." ಅವರು ಪುನಃ ಕೇಳಿದರು, "ಅನಂತರ ಯಾರು?" "ನಿನ್ನ ತಾಯಿಯೇ" ಪ್ರವಾದಿ ಹೇಳಿದರು. ಅವರು ಕೇಳಿದರು, "ಮತ್ತೆ ಯಾರು?" ಪ್ರವಾದಿ ಹೇಳಿದರು, "ನಿನ್ನ ತಂದೆ." (ಬುಖಾರಿ, ಮುಸ್ಲಿಮ್)

ಅನಸ್ ಬಿನ್ ಮಾಲಿಕ್‌ರಿಂದ ವರದಿ: ಪ್ರವಾದಿಯವರ ಅನುಚರ, ಭಕ್ತ, ಸಚ್ಚರಿತ ಮತ್ತು ದಯಾಳುವಾಗಿದ್ದ ಅಲ್ಕಮ ಮಾರಕ ರೋಗ ಪೀಡಿತರಾಗಿ ಹಾಸಿಗೆ ಹಿಡಿದರು. ಅವರ ಮಡದಿಯು ಪ್ರವಾದಿಯವರ(ಸ) ಬಳಿ ಬಂದು ಪ್ರವಾದಿಯನ್ನು ವಿನಂತಿಸಿದರು. ಪ್ರವಾದಿಯವರು(ಸ), ಬಿಲಾಲ್ ಬಿನ್ ರಬಾಹ, ಅಲೀ ಬಿನ್ ಅಬೀ ತಾಲಿಬ್ ಮತ್ತು ಉಮರುಲ್ ಫಾರೂಕ್‌ರನ್ನು ಹೆಚ್ಚಿನ ವಿವರ ತಿಳಿದು ಬರಲಿಕ್ಕಾಗಿ ಅಲ್ಕಮರ ಬಳಿಗೆ ಕಳುಹಿಸಿದರು. ಅವರು ಹೋಗಿ ಅಲ್ಕಮರ ಆರೈಕೆ ಮಾಡಿದರು. ಮರಣಾಸನ್ನರಾಗಿದ್ದ ಅವರಿಗೆ ಪವಿತ್ರ ವಚನ ಹೇಳಿಕೊಟ್ಟರು. ಆದರೆ, ಅದನ್ನು ಉಚ್ಚರಿಸಲು ಅಲ್ಕಮರಿಗೆ ಸಾಧ್ಯವಾಗಲಿಲ್ಲ. ಬಿಲಾಲ್ ಬಿನ್ ರಬಾಹರು ಪ್ರವಾದಿಯವರ(ಸ) ಬಳಿ ಬಂದು ನಡೆದ ವಿಷಯವನ್ನು ತಿಳಿಸಿದರು. ಆಗ ಪ್ರವಾದಿ(ಸ) ಹೇಳಿದರು, "ಅವರ ತಂದೆ ತಾಯಂದಿರು ಬದುಕಿದ್ದಾರೆಯೇ?" ಬಿಲಾಲ್ ಹೇಳಿದರು, "ಅವರ ತಂದೆಯು ಹಿಂದೆಯೇ ತೀರಿ ಹೋಗಿದ್ದಾರೆ. ವಯೋವೃದ್ಧ ತಾಯಿಯು ಅವರ ಜತೆಯಿದ್ದಾರೆ."

"ಅವರ ತಾಯಿಯ ಬಳಿಗೆ ಹೋಗಿ ನನ್ನ ಶುಭ ಹಾರೈಕೆಯನ್ನು ತಿಳಿಸಿರಿ. ಸಾಧ್ಯವಿದ್ದರೆ ನನ್ನ ಬಳಿಗೆ ಬರುವಂತೆ ತಿಳಿಸಿರಿ ಅಥವಾ ನಾನೇ ಅವರ ಬಳಿಗೆ ಹೋಗುವೆನು." ಪ್ರವಾದಿ(ಸ) ಬಿಲಾಲ್‌ರಿಗೆ ತಿಳಿಸಿದರು.

ಆ ವೃದ್ಧೆ ಬಂದಾಗ ಪ್ರವಾದಿಯವರು(ಸ) ಅವರನ್ನು ಗೌರವದಿಂದ ಬರಮಾಡಿ ಕೊಂಡರು. ಅನಂತರ ಅಲ್ಕಮರ ನಡೆ ನುಡಿಯ ಬಗ್ಗೆ ವಿಚಾರಿಸಿದರು. ಆ ವೃದ್ಧ ತಾಯಿ ಹೇಳಿದರು, "ನನ್ನ ಮಗ ಅಲ್ಕಮ ಅಲ್ಲಾಹನ ಆಜ್ಞೆಗಳನ್ನು ಯಥಾವಿಧಿ ಪಾಲಿಸುವ ಭಕ್ತನಾಗಿದ್ದಾನೆ. ಆದರೆ ನನ್ನೊಂದಿಗೆ ಆತನ ವರ್ತನೆ ಉತ್ತಮವಾಗಿಲ್ಲ. ಆದ್ದರಿಂದ ನನಗೆ ಅವನಲ್ಲಿ ಅಸಮಾಧಾನವಿದೆ. ಹಲವೊಮ್ಮೆ ಆತ ನನ್ನನ್ನು ಪತ್ನಿಯ ಮುಂದೆ ಹೀನೈಸುತ್ತಾನೆ. ನಾನು ಆಕೆಯ ಆಜ್ಞೆಗಳನ್ನು ಪಾಲಿಸಬೇಕಾಗುತ್ತದೆ."

ಪ್ರವಾದಿ ಹೇಳಿದರು, "ಅಲ್ಕಮನ ನಾಲಗೆಯು ಪವಿತ್ರ ವಚನವನ್ನು ಉಚ್ಚರಿಸದಿರುವುದಕ್ಕೆ ಅದೇ ಕಾರಣವಾಗಿದೆ" ಅನಂತರ ಅವರು ಅಲ್ಕಮರನ್ನು ಅಗ್ನಿಕುಂಡಕ್ಕೆ ಎಸೆಯಲಿಕ್ಕಾಗಿ ಸೌದೆ ತರುವಂತೆ ಬಿಲಾಲ್‌ರಿಗೆ ಆದೇಶಿಸಿದರು. ಇದನ್ನು ಕೇಳಿ ಆ ವೃದ್ಧ ತಾಯಿ ಗಟ್ಟಿಯಾಗಿ ಹೇಳಿದರು, "ಅಲ್ಲಾಹನ ಪ್ರವಾದಿಗಳೇ; ನನ್ನ ಮುಂದೆ ನನ್ನ ಮಗನನ್ನು ಬೆಂಕಿಗೆ ಹಾಕಿ ಸುಡುವುದೇ? ಅದನ್ನು ನನ್ನಿಂದ ಸಹಿಸಲಾದೀತೇ?" ಪ್ರವಾದಿ ಉತ್ತರಿಸಿದರು, "ಅಲ್ಲಾಹನ ಶಿಕ್ಷೆಯು ಇದಕ್ಕಿಂತ ಕಠೋರವಾಗಿದೆ. ಸಾಧ್ಯವಿದ್ದರೆ ಆತನಿಗೆ ಕ್ಷಮೆ ನೀಡಿರಿ. ಅನ್ಯಥಾ ಆತನ ನಮಾಝ್, ಉಪವಾಸ ವ್ರತ ಇತ್ಯಾದಿ ಸತ್ಕರ್ಮಗಳಿಂದ ಯಾವುದೇ ಪ್ರಯೋಜನವಿಲ್ಲ."

ಇದನ್ನು ಕೇಳಿ ಆ ತಾಯಿಯು ಮಗನನ್ನು ಕ್ಷಮಿಸಿದರು. ಪ್ರವಾದಿಯವರು(ಸ) ಬಿಲಾಲ್‌ರನ್ನು ಪುನಃ ಅಲ್ಕಮರ ಬಳಿಗೆ ಕಳುಹಿಸಿದರು. ಆಗ ಅಲ್ಕಮರು ಬಹಳ ಸ್ಪಷ್ಟವಾಗಿ ಪವಿತ್ರ ವಚನವನ್ನು ಉಚ್ಚರಿಸಿದರು. ಅದನ್ನು ಉಚ್ಚರಿಸುತ್ತಾ ಅವರು ಕೊನೆಯುಸಿರೆಳೆದರು. ಪ್ರವಾದಿಯವರೇ ಅವರ ಜನಾಝಾ ನಮಾಝ್‌ನ ನೇತೃತ್ವ ವಹಿಸಿದರು.

ಸಹೋದರಿ! ಈಗ ಹೇಳಿ, ನಿಮಗೆ ಅತ್ಯಂತ ಪ್ರಿಯವಾಗಿರುವ ನಿಮ್ಮ ಪತಿಯು ನಿಮ್ಮಿಂದಾಗಿ ನರಕದಲ್ಲಿ ಬೇಯುವುದನ್ನು ನಿಮಗೆ ಊಹಿಸಲು ಅಥವಾ ಸಹಿಸಲು ಸಾಧ್ಯವಿದೆಯೇ? ಹಾಗಿದ್ದರೆ ನಿಮ್ಮ ಜೀವನ ಸಂಗಾತಿಯಲ್ಲಿ ಅವರ ತಾಯಿಯ ಕುರಿತು ಕೋಪ ಅಥವಾ ಅಸಮಾಧಾನವಾಗುವಂತಹ ಯಾವ ಮಾತೂ ವರ್ತನೆಯೂ ನಿಮ್ಮಿಂದ ಪ್ರಕಟವಾಗದಿರಲಿ. ಅದರ ಬದಲಾಗಿ ಅವರಿಗೆ ತನ್ನ ತಾಯಿಯೊಂದಿಗೆ ಪ್ರೀತ್ಯಾದರ, ಒಲವು ಹೆಚ್ಚುವಂತಹ ರೀತಿಯಲ್ಲಿ ನೀವು ವರ್ತಿಸಿರಿ. ಈ ಹಿಂದಿನ ಜೀವನದಲ್ಲಿ ತದ್ವಿರುದ್ಧವಾಗಿ ಏನಾದರೂ ವರ್ತಿಸಿದ್ದರೆ ಅದನ್ನು ತಿದ್ದಿಕೊಂಡು ಪ್ರಾಮಾಣಿಕವಾಗಿ ಪಶ್ಚಾತ್ತಾಪಪಡಿರಿ.

ಅತ್ತೆಯನ್ನು ಸ್ವಂತ ತಾಯಿಯಂತೆ ನೋಡಿಕೊಳ್ಳಲು ನಿಮಗೆ ಸಾಧ್ಯವಾಗುವುದೇ? ಅವರನ್ನು ನೀವು ಗೌರವಿಸಿ, ಪ್ರಾಮಾಣಿಕವಾಗಿ ಪ್ರೀತಿಸುತ್ತಿರುವಿರಾ? ಎಲ್ಲ ಕಾರ್ಯ ಗಳನ್ನೂ ಅವರೊಂದಿಗೆ ವಿಚಾರಿಸಿ, ಸಮಾಲೋಚಿಸಿ ನಿರ್ವಹಿಸುತ್ತಿರುವಿರಾ? ಅಥವಾ ನಿಮ್ಮಿಷ್ಟದಂತೆ ಮಾಡುತ್ತೀರಾ? ನಿಮ್ಮ ಕುರಿತು ನಿಮ್ಮ ಅತ್ತೆಯ ಅಭಿಪ್ರಾಯ ಹೇಗಿದೆ? ಉತ್ತಮವಾಗಿದೆಯೇ? ಕೆಟ್ಟದೆಯೇ? ನೀವು ಅವರನ್ನು ನಿರ್ಲಕ್ಷಿಸುತ್ತಿರುವಿರೆಂಬ ಭಾವನೆ ಅವರಿಗಿದೆಯೇ? ನೀವು ಅವರೊಂದಿಗೆ ಎಂದಾದರೂ ಕೋಪಿಸಿ ಕೆಟ್ಟ ರೀತಿಯಲ್ಲಿ ವರ್ತಿಸಿದ್ದೀರಾ? ತಾತ್ಸಾರ ತೋರಿಸಿ ಚುಚ್ಚುಮಾತು ನುಡಿದಿದ್ದೀರಾ? ಅತ್ತೆಯಿಂದಾಗುವ ಯಾವುದೇ ಕೆಟ್ಟ ಅನುಭವವನ್ನು ತಾಳ್ಮೆಯಿಂದ ಸಹಿಸಲು ನಿಮ್ಮಿಂದ ಸಾಧ್ಯವಾಗು ತ್ತಿದೆಯೇ? ಕೆಡುಕನ್ನು ಒಳಿತಿನಿಂದ ಎದುರಿಸಿ ಪ್ರೀತಿಯಿಂದ ಅವರ ಮೇಲೆ ಪ್ರಭಾವ ಬೀರಬೇಕೆಂಬ ವಿಷಯ ನಿಮಗೆ ತಿಳಿದಿದೆಯೇ?

ಉತ್ತಮ ಸೊಸೆಯಾಗುವುದೆಂಬುದು ಒಂದು ಶ್ರೇಷ್ಠ ಕಲೆಯಾಗಿದೆ. ಅದು ತ್ಯಾಗವಾಗಿದೆ, ಪುಣ್ಯ ಕರ್ಮವಾಗಿದೆ, ಪರಲೋಕದಲ್ಲಿ ಪ್ರತಿಫಲಾರ್ಹ ಮತ್ತು ಇಹಲೋಕದಲ್ಲಿ ನೆಮ್ಮದಿದಾಯಕವಾಗಿದೆ. ಆದರೆ ಅದಕ್ಕೆ ಹೆಚ್ಚಿನ ಸಹನೆ, ತಾಳ್ಮೆ, ವಿನಯ ಮತ್ತು ಔದಾರ್ಯ ಮನೋಭಾವವಿರಬೇಕು. ಅಲ್ಲಾಹನೊಂದಿಗೆ ದೃಢವಿಶ್ವಾಸ ಮತ್ತು ಪರಲೋಕ ಪ್ರಜ್ಞೆಯಿಂದ ಮಾತ್ರ ಅದು ಸಾಧಿತವಾಗುತ್ತದೆ.

ಅತ್ತೆಯನ್ನು ಅಸಂತುಷ್ಟಗೊಳಿಸುವುದು ಘೋರ ಅಪರಾಧವಾಗಿದೆ ಮತ್ತು ಅಭಿಶಪ್ತವಾಗಿದೆ. ಈ ಲೋಕ ಜೀವನದಲ್ಲಿ ಅಸಂತೃಪ್ತಿ ಮತ್ತು ಪರಲೋಕದಲ್ಲಿ ಕಠಿಣ ಶಿಕ್ಷೆಗೆ ಹೇತುವೂ ಆಗಿದೆ. ಆದ್ದರಿಂದ ಅತ್ತೆಯ ಮನ ಸೆಳೆಯುವ ಸೊಸೆಯಾಗಿರಿ. ಆ ಮೂಲಕ ಉಭಯ ಲೋಕಗಳಲ್ಲಿಯೂ ವಿಜಯ ಖಾತ್ರಿಪಡಿಸಿರಿ.

# ಸೌಭಾಗ್ಯಶಾಲಿ ಅತ್ತೆ

ನೀವು ಉತ್ತಮ ಅತ್ತೆಯಾಗಿದ್ದೀರಾ? ನಿಮ್ಮ ಉಪಸ್ಥಿತಿಯು ಸೊಸೆಗೆ ನೆಮ್ಮದಿ ನೀಡುತ್ತಿದೆಯೇ ಅಥವಾ ಕಿರಿಕಿರಿಯಾಗಿದೆಯೇ? ಸೊಸೆಯನ್ನು ಸ್ವಂತ ಮಗಳೆಂದು ಭಾವಿಸಿ ಪ್ರೀತಿಸಲು ನಿಮಗೆ ಸಾಧ್ಯವಾಗುತ್ತಿದೆಯೇ?

ಮಗ ಮತ್ತು ಸೊಸೆಯ ಪರಸ್ಪರ ಸಂಬಂಧ ಸುದೃಢಗೊಂಡು ಪ್ರೀತಿ ಅನ್ಯೋನ್ಯತೆ ಹೆಚ್ಚುತ್ತಿರುವುದನ್ನು ನೋಡಿ ನಿಮ್ಮ ಮನಸ್ಸಿಗೆ ಸಂತೋಷವಾಗುತ್ತಿದೆಯೇ ಅಥವಾ ಬೇಸರವಾಗುತ್ತಿದೆಯೇ? ಮಗನು ಸೊಸೆಯೊಂದಿಗೆ ಸರಸ-ಸಲ್ಲಾಪ ನಡೆಸುವುದನ್ನು ನೋಡಿದರೆ ನಿಮ್ಮ ಮನದಲ್ಲಿ ಯಾವ ಭಾವನೆ ಮೂಡುತ್ತದೆ? ಆನಂದವೋ ಅಸೂಯೆಯೋ? ಮಗನು ದೂರ ಹೋಗುವಾಗ ಜತೆಯಲ್ಲಿ ಸೊಸೆಯನ್ನು ಕರೆದುಕೊಂಡು ಹೋಗುವುದನ್ನು ನೀವು ಪ್ರೋತ್ಸಾಹಿಸುತ್ತೀರಾ ಅಥವಾ ನಿರುತ್ತೇಜಿಸುತ್ತೀರಾ? ನೀವು ಮಗನೊಡನೆ ಸೊಸೆಯ ಬೇಡಿಕೆಗಳನ್ನು ಪೂರೈಸಲು ಹೇಳುತ್ತೀರಾ ಅಥವಾ ತಿರಸ್ಕರಿಸಲಾ?

ನಿಮ್ಮ ನಡೆನುಡಿ ಗುಣಸ್ವಭಾವವು ಮಗ ಮತ್ತು ಸೊಸೆಯನ್ನು ಹತ್ತಿರಗೊಳಿಸಲು ಪ್ರೇರಕವಾಗಿದೆಯೇ ಅಥವಾ ದೂರಗೊಳಿಸಲಾ? ಅವೆಲ್ಲವೂ ಅವರಲ್ಲಿ ಪ್ರೀತಿಯನ್ನು ಹೆಚ್ಚಿಸುತ್ತಿದೆಯೇ ಅಥವಾ ಕೋಪವನ್ನೇ?

ನೀವು ಸೊಸೆಯೊಡನೆ ಎಂದಾದರೂ ಕೋಪಿಸಿದ್ದೀರಾ? ಇದ್ದರೆ ಅದಕ್ಕೆ ನ್ಯಾಯೋಚಿತ ಕಾರಣವಿತ್ತೇ? ಅದಕ್ಕೆ ಕಾರಣವಾಗುವಂಥ ಲೋಪಗಳು ನಿಮ್ಮಿಂದಲೂ ಸಂಭವಿಸುವುದಿಲ್ಲವೇ? ಸೊಸೆಯಿಂದ ಏನಾದರೂ ತಪ್ಪು ಸಂಭವಿಸಿದರೆ ನೀವು ಏನು ಮಾಡುತ್ತೀರಿ? ಆರೋಪಿಸಿ, ಆಕ್ಷೇಪಿಸಿ ನೆಮ್ಮದಿಗೆಡಿಸುತ್ತೀರಾ? ಹಾಗಿದ್ದರೆ ತಿಳಿಯಿರಿ. ಅಂಥ ವರ್ತನೆಗಳಿಂದ ಯಾವ ಪ್ರಯೋಜನವೂ ಇಲ್ಲ. ಅದೇ ವೇಳೆ ಸೊಸೆಗೆ ನಿಮ್ಮ ಮೇಲಿನ ಪ್ರೀತಿ, ಗೌರವ ಕಡಿಮೆಯಾಗುತ್ತದೆ. ಪ್ರೀತಿಯಿಂದ ಉಪದೇಶಿಸಿ, ಔದಾರ್ಯ ತೋರಿ, ಕರುಣೆಯಿಂದ ವರ್ತಿಸಿದರೆ ಮಾತ್ರ ಯಾರಲ್ಲಿಯೂ ಬದಲಾವಣೆಯನ್ನು ತರಬಹುದು. ಆರೋಪ, ಆಕ್ಷೇಪದ ಮಾತುಗಳು ಯಾರಲ್ಲಿಯೂ ಉತ್ತಮ ಭಾವನೆಗಳನ್ನು ಬೆಳೆಸಲಾರವು. ಅದರಿಂದ ಕೇವಲ ಪ್ರತಿಭಟನೆ ಮತ್ತು ಪ್ರತೀಕಾರ ಭಾವನೆಯೇ ಹೆಚ್ಚುತ್ತದೆ.

ನೀವು ಮನೆಯಲ್ಲಿ ಓರ್ವ ಸರ್ವಾಧಿಕಾರಿಯಂತೆ ವರ್ತಿಸುತ್ತೀರಾ? ಸೊಸೆಗೆ ಯೋಗ್ಯ ಗಮನ ನೀಡುತ್ತೀರಾ? ಮನೆಯ ವ್ಯವಹಾರ ಮತ್ತು ಅಡುಗೆ ಇತ್ಯಾದಿಗಳಲ್ಲಿ ಆಕೆಯ ಜತೆ

ಸಮಾಲೋಚಿಸುತ್ತೀರಾ? ಪರಸ್ಪರ ಸಹಕಾರದ ರೀತಿಯನ್ನು ಅವಲಂಬಿಸುತ್ತೀರಾ? ತಿಳಿದಿರಲಿ, ಸಮಾಲೋಚನೆಯು ಸತ್ಯವಿಶ್ವಾಸಿಗಳ ಕಡ್ಡಾಯ ಕರ್ತವ್ಯವಾಗಿದೆ. ಪ್ರವಾದಿಯವರಿಗೆ ಅದನ್ನು ಪಾಲಿಸುವಂತೆ ಆಜ್ಞಾಪಿಸಲಾಗಿತ್ತು. ಅವರು ಅದನ್ನು ಕಟ್ಟುನಿಟ್ಟಾಗಿ ಪಾಲಿಸಿ, ಅತ್ಯುತ್ತಮ ಸಲಹೆಗಳನ್ನು ಸಂತೋಷದಿಂದ ಸ್ವೀಕರಿಸುತ್ತಿದ್ದರು. ಪತ್ನಿಯರ ಅಭಿಪ್ರಾಯ ಮತ್ತು ಸಲಹೆಗಳಿಗೆ ಆದ್ಯತೆ ನೀಡುತ್ತಿದ್ದರು. ಮನೆ ವ್ಯವಹಾರಗಳಲ್ಲಿ ಮಾತ್ರವಲ್ಲದೆ, ಸಾರ್ವಜನಿಕ ಸಮಸ್ಯೆಗಳಲ್ಲಿಯೂ ಅವರ ಅಭಿಪ್ರಾಯಗಳನ್ನು ಅಂಗೀಕರಿಸುತ್ತಿದ್ದರು. ಹುದೈಬಿಯಾ ಒಪ್ಪಂದದ ಬಳಿಕ ಇಹ್ರಾಮ್‌ನಿಂದ ಮುಕ್ತವಾಗಿ ಉಮ್ರಾ ಕೊನೆಗೊಳಿಸಲು ಅನುಯಾಯಿಗಳು ಸಂಕೋಚಪಟ್ಟಾಗ ಪ್ರವಾದಿಯವರು(ಸ) ಪತ್ನಿಯ ಸಲಹೆಯಂತೆಯೇ ತಲೆ ಕ್ಷೌರ ಮಾಡಿ ಮಾದರಿ ತೋರಿಸಿದ್ದರು. ಆದ್ದರಿಂದ ಪ್ರಮುಖ ವಿಷಯಗಳಲ್ಲಿ ಸೊಸೆಯೊಂದಿಗೆ ಸಮಾಲೋಚಿಸಿ ಆಕೆಯ ಅಭಿಪ್ರಾಯಗಳಿಗೆ ಪ್ರಾಧಾನ್ಯ ನೀಡಬೇಕು.

ನೀವು ಮನೆಗೆಲಸಗಳಲ್ಲಿ ಸೊಸೆಗೆ ಸಹಾಯ ಮಾಡುತ್ತೀರಾ? ಭಾರವಾದ ಕೆಲಸ ಗಳನ್ನು ಸೊಸೆಗೆ ವಹಿಸಿಕೊಟ್ಟು ದೂರ ನಿಲ್ಲುತ್ತೀರಾ? ಸೊಸೆ ಮಾಡಿದ ಅಡುಗೆಯನ್ನು ದೂರುತ್ತೀರಾ? ಆಕೆ ಮಾಡಿದರೆ ಯಾವುದೂ ಸರಿ ಹೋಗುವುದಿಲ್ಲ. ನಾನು ಮಾಡಿದರೆ ಮಾತ್ರ ಸರಿಯಾಗುವುದೆಂಬ ಭಾವನೆ ನಿಮ್ಮಲ್ಲಿದೆಯೇ? ಎಲ್ಲ ವಿಷಯಗಳಲ್ಲಿಯೂ ಅತ್ತೆ ಮತ್ತು ಸೊಸೆಯಂದಿರು ಪರಸ್ಪರ ಸಹಕಾರದ ರೀತಿಯನ್ನು ಅವಲಂಬಿಸಲು ಪ್ರಯತ್ನಿಸಬೇಕು.

ಮನೆಗೆ ಬರುವ ಅತಿಥಿಗಳು ಮತ್ತು ನೆರೆಕರೆಯವರೊಂದಿಗೆ ನೀವು ಸೊಸೆಯನ್ನು ದೂರಿ ಮಾತಾಡುತ್ತೀರಾ? ಆಕೆಯ ಸಂಬಂಧಿಕರು ಅತಿಥಿಗಳಾಗಿ ಬಂದಾಗ ಅವರಿಗೆ ಯೋಗ್ಯ ಗಮನ ನೀಡುತ್ತೀರಾ? ಸೊಸೆಯ ತಂದೆ ತಾಯಂದಿರು ಹಾಗೂ ಇತರರ ಬಗ್ಗೆ ದೂರಿ ಮಾತಾಡುತ್ತೀರಾ?.

ಸೊಸೆ ಮಾಡುವ ಉತ್ತಮ ಕೆಲಸಗಳಿಗಾಗಿ ಆಕೆಯನ್ನು ಹೊಗಳುತ್ತೀರಾ? ಅವಶ್ಯಕ ಪ್ರೇರಣೆ ಮತ್ತು ಪ್ರೋತ್ಸಾಹ ನೀಡುತ್ತೀರಾ? ಆಕೆಯ ಸಂತೋಷ ಸಂತಾಪಗಳಲ್ಲಿ ಪ್ರಾಮಾಣಿಕವಾಗಿ ಪಾಲ್ಗೊಳ್ಳುತ್ತೀರಾ?

ನೀವು ಸೊಸೆಯಾಗಿದ್ದಾಗ ನಿಮ್ಮ ಅತ್ತೆಯಿಂದ ಏನಾದರೂ ಕೆಟ್ಟ ಅನುಭವ ಗಳಾಗಿವೆಯೇ? ಆಗಿದ್ದರೆ ಅಂದು ನೀವು ಅನುಭವಿಸಿದ ತೊಂದರೆಗಳ ನೆನಪಿದೆಯೇ? ಅಂದು ನೀವು ಕಷ್ಟಪಟ್ಟಂತೆಯೇ ನಿಮ್ಮ ಸೊಸೆಯೂ ಕಷ್ಟಪಡಬೇಕೆಂದು ನೀವು ಬಯಸುತ್ತೀರಾ? ಅತ್ತೆಯಿಂದ ನಿಮಗಾದ ಕೆಟ್ಟ ಅನುಭವಗಳನ್ನು ಸೊಸೆಗೂ ಮಾಡಿಸ ಬೇಕೆಂದು ನಿಮಗೆ ಎಂದಾದರೂ ತೋಚಿದೆಯೇ? ನಿಮ್ಮ ಮನೆಯಲ್ಲಿ ಅತ್ತೆ ಸೊಸೆ ಜಗಳ ನಡೆಯಲಾರದೆಂದು ಖಾತ್ರಿಪಡಿಸಲು ನಿಮಗೆ ಸಾಧ್ಯವಿದೆಯೇ?

ಮೇಲೆ ಕೇಳಿದಂಥ ಇತರ ಪ್ರಶ್ನೆಗಳನ್ನೂ ಸ್ವತಃ ಕೇಳಿರಿ. ಅವುಗಳಿಗೆ ದೊರೆಯುವ ಉತ್ತರವು ತೃಪ್ತಿಕರವಾಗಿದ್ದರೆ ನೀವು ಅನುಗ್ರಹೀತರಾಗಿರುವಿರಿ. ಸೌಭಾಗ್ಯ ಶಾಲಿ ಮತ್ತು ಆದರ್ಶಪ್ರಾಯರಾಗಿರುವಿರಿ. ಅನ್ಯಥಾ ಸೂಕ್ತ ಬದಲಾವಣೆಗಳನ್ನು ಮಾಡಿಕೊಳ್ಳಿರಿ.

ನಿಮ್ಮ ಪುತ್ರ ಗಲ್ಫ್‌ನಲ್ಲಿದ್ದರೆ ಸೊಸೆಯೊಂದಿಗಿನ ವ್ಯವಹಾರಗಳನ್ನು ಆದಷ್ಟು ಪ್ರೀತಿಪೂರ್ವಕ ಮತ್ತು ಉದಾರವಾಗಿ ನಿರ್ವಹಿಸಲು ಪ್ರಯತ್ನಿಸಿರಿ. ನಮ್ಮ ದೇಶದ ಸಹಸ್ರಾರು ಯುವಕರು ಇಂದು ಗಲ್ಫ್‌ನಲ್ಲಿದ್ದಾರೆ. ಅವರ ಯುವ ಪತ್ನಿಯರು ಇಲ್ಲಿಯೇ ಇದ್ದಾರೆ. ಅವರಲ್ಲಿ ಹೆಚ್ಚಿನವರು ಪತಿ ಗೃಹಗಳಲ್ಲಿಯೇ ವಾಸವಾಗಿದ್ದಾರೆ.

ಗಲ್ಫ್‌ನಲ್ಲಿರುವವರಲ್ಲಿ ಹೆಚ್ಚಿನ ಮಂದಿ ಎರಡು ವರ್ಷಗಳಿಗೊಮ್ಮೆ ಊರಿಗೆ ಬರುತ್ತಾರೆ. ಒಂದೆರಡು ತಿಂಗಳ ರಜೆಯಿರುತ್ತದೆ. ಆದ್ದರಿಂದ ಉಳಿದ 22 ತಿಂಗಳು ಅವರ ಪತ್ನಿಯರು ಇಲ್ಲಿ ವಿರಹ ವೇದನೆಯನ್ನು ಅನುಭವಿಸುತ್ತಾರೆ. ಪತಿಯಿರುತ್ತಾ ಒಂಟಿಯಾಗಿರುವ ಹೆಣ್ಣಿನ ಮನೋವ್ಯಥೆಯನ್ನು ವರ್ಣಿಸಲಸಾಧ್ಯ. ಅವರಲ್ಲಿ ಹೆಚ್ಚಿನವರ ರಾತ್ರಿಗಳು ನಿದ್ರಾಹೀನವಾಗಿರುತ್ತವೆ. ಶಯ್ಯಾಗಾರದ ಸಹಸ್ರಾರು ತಲೆದಿಂಬುಗಳು ಅವರ ಕಣ್ಣೀರಿನಿಂದ ಒದ್ದೆಯಾಗಿರುತ್ತವೆ. ಸಹಿಸಲಾಗದ ದುಃಖ ಮತ್ತು ಮನೋವ್ಯಥೆಯಿಂದಾಗಿ ಅವರ ದೇಹವು ಸೊರಗುತ್ತದೆ. ಹಲವು ರೋಗಗಳು ಆವರಿಸುತ್ತವೆ. ವಿರಹ ವೇದನೆಯೊಂದಿಗೆ ಹೆಚ್ಚಿನವರು ಮನೆಯ ಮತ್ತು ಮಕ್ಕಳ ಪೂರ್ಣ ಜವಾಬ್ದಾರಿಕೆಯನ್ನು ವಹಿಸಬೇಕಾಗುತ್ತದೆ. ಹೀಗೆ ಅನೇಕ ಕಾರಣಗಳಿಂದ ಮನೋವ್ಯಥೆ ಮತ್ತು ದೈಹಿಕ ಆಯಾಸವನ್ನು ಅನುಭವಿಸುವ ಸಹೋದರಿಯರಿಗೆ ಅತ್ತೆ ನಾದಿನಿಯರ ನಿಂದನೆಗಳನ್ನು ಸಹಿಸಬೇಕಾದ ಸ್ಥಿತಿಯು ಅತ್ಯಂತ ಶೋಚನೀಯವೇ ಸರಿ. ಕೆಲವು ಅತ್ತೆ ನಾದಿನಿಯರು ಗಲ್ಫ್‌ನಲ್ಲಿರುವವರೊಡನೆ ಅವರ ಪತ್ನಿಯರ ಕುರಿತು ಇರುವ ಹಾಗೂ ಇಲ್ಲದಂಥ ತಪ್ಪುಗಳನ್ನೂ ಕುಂದು ಕೊರತೆಗಳನ್ನೂ ಪತ್ರ ಮತ್ತು ದೂರವಾಣಿ ಮೂಲಕ ತಿಳಿಸುತ್ತಲಿರುತ್ತಾರೆ. ತಾಯಂದಿರ ಮತ್ತು ಸಹೋದರಿಯರ ಮಾತುಗಳನ್ನು ನಂಬಿ ಪತ್ರ ಮತ್ತು ಫೋನ್ ಮೂಲಕ ಪತ್ನಿಯರನ್ನು ಪೀಡಿಸುವ ಪುರುಷರೂ ಧಾರಾಳವಿದ್ದಾರೆ.

ನನ್ನಿಂದಾಗಿ ಸೊಸೆಗೆ ತೊಂದರೆಯಾಗಲಾರದೆಂದು ತೀರ್ಮಾನಿಸಲು ಅತ್ತೆಯಂದಿರಿಗೆ ಸಾಧ್ಯವಾಗಬೇಕು. ಪತಿಯ ಅನುಪಸ್ಥಿತಿಯಿಂದ ಅವರು ಅನುಭವಿಸುವ ತೊಂದರೆಗಳನ್ನು ಹಗುರಗೊಳಿಸಿ ಸಾಂತ್ವನ ನೀಡಲು, ಅಮಿತ ಪ್ರೀತಿ ಮತ್ತು ಸಹಕಾರದಿಂದ ಸಾಧಿಸಬೇಕು. ಸೊಸೆಯನ್ನು ಮಗನಿಂದ ದೂರಗೊಳಿಸುವ ಬದಲಾಗಿ ನಿಕಟಗೊಳಿಸಲು ನಿರ್ಧರಿಸಬೇಕು. ಅದನ್ನು ಎಚ್ಚರದಿಂದ ಕಾರ್ಯಗತಗೊಳಿಸಬೇಕು.

ಪ್ರತಿಯೋರ್ವ ಸ್ತ್ರೀಯ ಸೋಲು-ಗೆಲುವುಗಳ ನಿರ್ಣಯದಲ್ಲಿ, ಅತ್ತೆಯೆಂಬ ನೆಲೆಯಲ್ಲಿ ಆಕೆಯ ಗುಣನಡತೆ, ಧೋರಣೆಗಳಿಗೆ ಪ್ರಧಾನ ಪಾತ್ರವಿದೆ. ಸಮಾಜದ ಇತರರೊಡನೆ ಚೆನ್ನಾಗಿ ವರ್ತಿಸುವವರೂ ಕೆಲವೊಮ್ಮೆ ಸೊಸೆಯರೊಂದಿಗೆ ಕೆಟ್ಟ ರೀತಿಯಲ್ಲಿ ವರ್ತಿಸುತ್ತಾರೆ. ಆದ್ದರಿಂದಲೇ ಸೊಸೆಯರೊಂದಿಗಿನ ವರ್ತನೆಯೇ ಓರ್ವ ಮಹಿಳೆಯನ್ನು ಅಳೆಯುವ ಸರಿಯಾದ ಮಾನದಂಡವೆಂದು ಹೇಳಲಾಗಿದೆ. ಸದ್ಗುಣವೇ ಯಶಸ್ಸಿನ ದಾರಿಯಾಗಿದ್ದು, ಜತೆಯಲ್ಲಿರುವ ಸೊಸೆಯೊಂದಿಗಿನ ವರ್ತನೆಯೇ ಅದರ ಮಾನದಂಡವೆಂಬುದನ್ನು ಎಂದಿಗೂ ಮರೆಯಬಾರದು.

ಪ್ರವಾದಿ(ಸ) ಹೇಳಿದ್ದಾರೆ, "ಅಂತ್ಯ ದಿನದಲ್ಲಿ ಸತ್ಯವಿಶ್ವಾಸಿಯ ತಕ್ಕಡಿಯಲ್ಲಿ ಸದ್ಗುಣಗಳಿಗಿಂತ ಭಾರವಾದ ವಸ್ತು ಬೇರೊಂದಿಲ್ಲ, ಖಂಡಿತವಾಗಿಯೂ ಅಶ್ಲೀಲ, ಅಸಭ್ಯ ಮಾತಾಡುವುದನ್ನು ಅಲ್ಲಾಹನು ದ್ವೇಷಿಸುತ್ತಾನೆ." (ತಿರ್ಮಿದಿ)

ಜನರನ್ನು ಸ್ವರ್ಗಕ್ಕೆ ಅತ್ಯಧಿಕ ಪ್ರವೇಶಗೊಳಿಸುವುದು ಯಾವುದೆಂದು ಪ್ರಶ್ನಿಸಿದಾಗ ಪ್ರವಾದಿಯವರು ಹೇಳಿದರು, "ಅಲ್ಲಾಹನೊಂದಿಗಿನ ಭಯ-ಭಕ್ತಿ ಮತ್ತು ಸದ್ಗುಣ." (ತಿರ್ಮಿದಿ)

ಸದ್ಗುಣದಿಂದಾಗಿ ಸತ್ಯವಿಶ್ವಾಸಿಗೆ ನಿಂತು ನಮಾಝ್ ಮಾಡುವವನ ಹಾಗೂ ಉಪವಾಸ ಆಚರಿಸುವವನ ಸ್ಥಾನ ದೊರೆಯುವುದೆಂದು ಪ್ರವಾದಿಯವರು(ಸ) ಹೇಳಿರುವುದಾಗಿ ಆಯಿಶಾ(ರ) ವರದಿ ಮಾಡಿದ್ದಾರೆ. (ಅಬೂದಾವೂದ್)

# ಅತ್ತಿಗೆ-ನಾದಿನಿ ಸಂಬಂಧ

ಒಮ್ಮೆ ಗಲ್ಫ್ ಸಂದರ್ಶನದ ವೇಳೆ ಓರ್ವ ಹಳೆಯ ಮಿತ್ರನನ್ನು ಭೇಟಿಯಾದೆ. ಆತ ವಿದ್ಯಾರ್ಥಿ ಆಂದೋಲನದಲ್ಲಿ ನನ್ನ ಸಹಕಾರ್ಯಕರ್ತನಾಗಿದ್ದ. 25 ವರ್ಷಗಳ ಹಿಂದೆ ದೇಶ ತೊರೆದಿದ್ದ. ಆ ಬಳಿಕ ಈ ತನಕ ನೋಡಿಲ್ಲ. ಮುಖದಲ್ಲಿ ಪ್ರಾಯಕ್ಕಿಂತ ಹೆಚ್ಚಿನ ಬಳಲಿಕೆಯಿದ್ದುದರಿಂದ ಗುರುತಿಸಲು ಸ್ವಲ್ಪ ಕಷ್ಟವಾಯಿತು. ಹಳೆಯ ಗೆಳೆತನದ ಜಾಡಲ್ಲಿ ಮಾತು ಮುಂದುವರಿದಾಗ ನಾನು ಕೇಳಿದೆ, "ಗಲ್ಫ್‌ಗೆ ವಿದಾಯ ಹೇಳುವುದಿಲ್ಲವೇ?"

"ಇಲ್ಲ, ಊರಿಗೆ ಮರಳಿದರೆ ಜೀವನಕ್ಕೆ ಗತಿಯಿರಲಾರದು" ಮಿತ್ರ ಹೇಳಿದ.

"ಇಷ್ಟು ಕಾಲವಿದ್ದರೂ ಏನೂ ಮಾಡಿಲ್ಲವೇ?"

"ವಾಸಕ್ಕೆ ಒಂದು ಮನೆಯೂ ಆಗಿಲ್ಲ. ಹಾಗಿದ್ದರೂ ನಾಲ್ವರು ಸಹೋದರಿಯರಿಗೆ ವಿವಾಹ ಮಾಡಿಸಿದ್ದೇನೆ. ಅವರೆಲ್ಲರೂ ಸುಖವಾಗಿದ್ದಾರೆ. ಅದುವೇ ಮನಸ್ಸಿಗೆ ನೆಮ್ಮದಿ" ನಿಟ್ಟುಸಿರು ಬಿಡುತ್ತಾ ಮಾತು ಮುಗಿಸಿದ.

"ಮಕ್ಕಳು ಏನು ಮಾಡುತ್ತಿದ್ದಾರೆ?" ಎಂಬ ಪ್ರಶ್ನೆಯು ಗೆಳೆಯನ ಮುಖದಲ್ಲಿ ವಿಷಾದದ ಛಾಯೆ ಮೂಡಿಸಿತೋ ತಿಳಿಯಲಿಲ್ಲ. ಏನಿದ್ದರೂ ಅದರಿಂದ ಇನ್ನೊಂದು ದುಃಖ ಸತ್ಯ ವ್ಯಕ್ತವಾಯಿತು. ಮರಳುಗಾಡಿನ ಚಳಿ ಮತ್ತು ಬಿಸಿಯಲ್ಲಿ ಎರಡೂವರೆ ದಶಕ ನೆಲೆಸಿದ ಆ ಮಿತ್ರ ಹೇಳಿದ, "ಮಕ್ಕಳೆಲ್ಲರೂ ಚಿಕ್ಕವರು. ಬಹಳ ತಡವಾಗಿ ವಿವಾಹವಾದೆ. ಕಿರಿಯ ಸಹೋದರಿಯ ವಿವಾಹ ಮಾಡಿಸಿದ ಬಳಿಕ...."

ಗಲ್ಫ್‌ನಲ್ಲಿರುವ ಸಹಸ್ರಗಟ್ಟಲೆ ಯುವಕರು ಇದೇ ರೀತಿಯ ಪರಿಸ್ಥಿತಿಯನ್ನು ಅನುಭವಿಸಿದ್ದಾರೆ. ಅವರು ಊರು, ಮನೆಮಾರು, ಸಂಬಂಧಿಕರು, ಗೆಳೆಯರನ್ನು ತೊರೆದು ಗಲ್ಫ್ ರಾಷ್ಟ್ರಗಳಿಗೆ ಹೋಗಿ ಅಲ್ಲಿನ ಕಠಿಣ ತಾಪ ಮತ್ತು ಮೈ ಕೊರೆಸುವ ಚಳಿಯನ್ನು ಸಹಿಸಿ, ಸಹೋದರಿಯರ ಉತ್ತಮ ಮತ್ತು ಸುಭದ್ರ ಜೀವನಕ್ಕಾಗಿಯೇ ದುಡಿಯುತ್ತಾರೆ. ತಮ್ಮ ಸಹೋದರಿಯರಿಗೆ ಯೋಗ್ಯ ವರರು ದೊರೆಯದಿರುವುದರಿಂದಲೇ 27-30ರ ವಯೋಮಾನದಲ್ಲಿರುವ ಸಮಾಜದ ಬಹುತೇಕ ಯುವಕರು ವಿವಾಹವಾಗದೆ ಬಾಳುತ್ತಿದ್ದಾರೆ. ತಂಗಿಯಂದಿರ ವಿವಾಹವಾಗುವ ತನಕ ದಾಂಪತ್ಯ ಜೀವನವೇ ಬೇಡವೆಂದು ನಿರ್ಧರಿಸಿದ ಸಾವಿರಾರು ಯುವಕರು ನಮ್ಮ ದೇಶದಲ್ಲಿದ್ದಾರೆ.

ಆದರೆ ಸಹೋದರಿಯರಿಗಾಗಿ ಜೀವನವನ್ನು ಸವೆಸುವ ಮಹಾ ತ್ಯಾಗಿಗಳಾದ ಈ ಯುವಕರೊಂದಿಗೆ ಸಮಾಜವು ಸಹಾನುಭೂತಿ ಹೊಂದಿಲ್ಲ ಅಥವಾ ಗೌರವಿಸುತ್ತಿಲ್ಲ

ವೆಂಬುದು ಅಚ್ಚರಿದಾಯಕವಾಗಿದೆ. ಪುರುಷ ಸಮಾಜವು ಸ್ತ್ರೀಯರಿಗಾಗಿ ಮಾಡುವ ಈ ವಿಶೇಷ ಗಮನವು ಸಾಕಷ್ಟು ಮನ್ನಣೆ ಅಥವಾ ಪ್ರಶಂಸೆಗೆ ಪಾತ್ರವಾಗಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಸಹೋದರಿಯರು ಕೆಲವು ಪ್ರಶ್ನೆಗಳನ್ನು ಎದುರಿಗಿಟ್ಟು ಅವುಗಳಿಗೆ ಉತ್ತರ ಕಂಡು ಹಿಡಿಯಲು ಪ್ರಯತ್ನಿಸಬೇಕಾದುದು ಹೆಚ್ಚು ಉಪಯುಕ್ತವಾಗಿದೆ.

ನಿಮಗಾಗಿ ಯೌವನವನ್ನು ಬಲಿ ನೀಡಿರುವ ಸಹೋದರರನ್ನು ನೀವು ಕೃತಜ್ಞತೆ ಯಿಂದ ಸ್ಮರಿಸುತ್ತೀರಾ? ಅವರ ಜೀವನವನ್ನು ಸುಖಮಯ ಮತ್ತು ನೆಮ್ಮದಿದಾಯಕ ಗೊಳಿಸಲಿಕ್ಕಾಗಿ ನೀವು ಅಲ್ಲಾಹನೊಡನೆ ಪ್ರಾರ್ಥಿಸುತ್ತೀರಾ? ನಿಮ್ಮ ಉತ್ತಮ ದಾಂಪತ್ಯ ಜೀವನಕ್ಕಾಗಿ ಬಹಳಷ್ಟು ಕಷ್ಟ-ನಷ್ಟಗಳನ್ನು ಸಹಿಸಿದ ಸಹೋದರನ ದಾಂಪತ್ಯವು ಸಂತೋಷ ದಾಯಕವಾಗಲೆಂದು ಆಶಿಸುತ್ತೀರಾ? ಅದಕ್ಕಾಗಿ ನೀವು ಅನುವು ಮಾಡಿಕೊಟ್ಟಿದ್ದೀರಾ? ಸಹೋದರನ ಸಹ ಧರ್ಮಿಣಿಯೊಡನೆ ಉತ್ತಮವಾಗಿ ವರ್ತಿಸುವ ಮೂಲಕ ಸಹೋದರನಿಗೆ ಕೃತಜ್ಞರಾಗಿದ್ದೀರಾ? ಸಹೋದರನು ನಿಮಗಾಗಿ ಬಹಳಷ್ಟು ತ್ಯಾಗವನ್ನು ಸಹಿಸಿದುದರಿಂದ, ಆತನ ಪತ್ನಿಯು ವಿರಹ ವೇದನೆಯನ್ನು ಅನುಭವಿಸುತ್ತಿರುವಳೆಂಬುದನ್ನು ಜ್ಞಾಪಿಸಿ ಆಕೆಯೊಂದಿಗೆ ಸಹಾನುಭೂತಿಯನ್ನು ತೋರಿಸುತ್ತಿರುವಿರಾ? ನಿಮ್ಮ ಉಪಸ್ಥಿತಿಯಿಂದ ಸಹೋದರನ ಪತ್ನಿಗೆ ಅನುಕೂಲ ಮತ್ತು ಸಂತೋಷವಾಗುತ್ತಿದೆಯೇ? ಅಥವಾ ಸಂಕಟ ಮತ್ತು ದುಃಖವಾಗುತ್ತಿದೆಯೇ? ಸಹೋದರನು ತನ್ನ ಪತ್ನಿಗೆ ಟೆಲಿಫೋನ್ ಮಾಡಿದಾಗ, ಪತ್ರ ಬರೆದಾಗ ಮತ್ತು ಹಣ ಕಳುಹಿಸಿದಾಗ ನಿಮಗೆ ಅಸೂಯೆ ಮತ್ತು ಅಸಂತೃಪ್ತಿ ಯಾಗುತ್ತಿದೆಯೇ? ಅಥವಾ ಸಂತೋಷ ಮತ್ತು ಸಂತೃಪ್ತಿಯಾಗುತ್ತಿದೆಯೇ? ತನ್ನ ಸಹೋದರನು ಆತನ ಮಡದಿಗೆ ನೀಡುವಂಥ ವಸ್ತುಗಳು ತನಗೂ ದೊರೆಯಬೇಕೆಂದು ಆಸೆಪಟ್ಟು ಹಠ ಹಿಡಿಯುತ್ತೀರಾ? ಆದರೆ ನನ್ನ ವಿವಾಹವಾಗುವ ತನಕ ಕಾದು ಕುಳಿತ ಸಹೋದರನು ಮುಂದೆ ನನಗೆ ಏನನ್ನೂ ನೀಡಬೇಕಾಗಿಲ್ಲ, ವಿಳಂಬಿಸಿದ ದಾಂಪತ್ಯ ಜೀವನವನ್ನು ಸಾರ್ಥಕಗೊಳಿಸಲು ಆದಷ್ಟು ಪ್ರಯತ್ನಿಸಲಿ ಎಂದು ಭಾವಿಸುತ್ತೀರಾ?

ಸಹೋದರನು ಊರಿಗೆ ಬಂದಾಗ ಈ ಹಿಂದೆ ಮಾಡಿದ ಉಪಕಾರಗಳನ್ನು ಜ್ಞಾಪಿಸಿ ಅವತ್ತೇ ಹೋಗಿ ಅವನಿಗೆ ಕೃತಜ್ಞತೆ ಸಲ್ಲಿಸುತ್ತೀರಾ? ಗಲ್ಫ್‌ನಿಂದ ಬರುವಾಗ ತಂದಿರುವ ಪೆಟ್ಟಿಗೆಯನ್ನು ತನ್ನ ಮಡದಿಗೆ ನೀಡಿದಾಗ ನಿಮಗೆ ಸಂಕಟವಾಗುತ್ತಿದೆಯೇ? ಅದನ್ನು ತನ್ನ ಮುಂದೆಯೇ ತೆರೆಯಬೇಕೆಂದು ಬಯಸಿ, ಆ ರೀತಿ ಮಾಡದಿದ್ದರೆ ಮುಖ ಸಿಂಡರಿಸುತ್ತೀರಾ? ಊರಿಗೆ ಬಂದ ಸಹೋದರನು ಮಡದಿಯ ಜತೆಯಲ್ಲಿ ಸಂಬಂಧಿಕರು ಮತ್ತು ಮಿತ್ರರ ಮನೆಗೆ ಹೋದಾಗ ಅಸೂಯೆ ಮತ್ತು ಬೇಸರವಾಗುತ್ತದೆಯೇ ಅಥವಾ ಸಂತೋಷವಾಗುತ್ತದೆಯೇ?

ನಿಮ್ಮಿಂದಾಗಿ ಸಹೋದರನ ಪತ್ನಿಗೆ ಎಂದಾದರೂ ತೊಂದರೆಯಾಗಿದೆಯೇ? ದುಃಖದಿಂದ ಕಣ್ಣೀರು ಸುರಿಸುವಂತಾಗಿದೆಯೇ? ಆಕೆಯನ್ನು ಸತಾಯಿಸುವುದರಿಂದ ಸಹೋದರನಿಗೆ ಬೇಸರವಾದೀತೆಂದು ಎಂದಾದರೂ ಭಾವಿಸಿದ್ದೀರಾ? ನೀವು ಸಂದರ್ಶನಕ್ಕೆ

ಹೋಗುವಾಗ ಸಹೋದರನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವೆಂಬ ನೆಲೆಯಲ್ಲಿ ಆತನ ಪ್ರಿಯತಮೆಗೆ ಏನಾದರೂ ಪುಟ್ಟ ಉಡುಗೊರೆಗಳನ್ನು ಕೊಟ್ಟಿದ್ದೀರಾ? ಅತ್ತಿಗೆಯು ನಿಮ್ಮೊಡನೆ ಉತ್ತಮ ರೀತಿಯಲ್ಲಿ ಒಡನಾಡಬೇಕೆಂದು ನೀವು ಬಯಸುವುದಿಲ್ಲವೇ? ನಿಮ್ಮ ಅತ್ತಿಗೆಯಂದಿರೊಡನೆ ನಿಮ್ಮ ಧೋರಣೆಯೂ ಅದೇ ರೀತಿಯಿರಬೇಕೆಂಬ ನಿಷ್ಕರ್ಷೆ ನಿಮಗಿದೆಯೇ? ನೀಡಿದ್ದೇ ದೊರೆಯುವುದೆಂಬ ನಾಣ್ಣುಡಿಯನ್ನು ಕೇಳಿಲ್ಲವೇ?

ಇಂಥ ಪ್ರಶ್ನೆಗಳನ್ನು ಸ್ವತಃ ಕೇಳಿ ಅದಕ್ಕೆ ದೊರೆಯುವ ಉತ್ತರವು ತೃಪ್ತಿಕರವಲ್ಲವೆಂದಾದರೆ ಜೀವನದಲ್ಲಿ ಅವಶ್ಯಕ ಬದಲಾವಣೆಗಳನ್ನು ಆದಷ್ಟು ಮಾಡಿರಿ. ಹಾಗಾದರೆ ಸಮಾಜದಲ್ಲಿ ನಿರಂತರವಾಗಿ ಮುಂದುವರಿಯುತ್ತಿರುವ ಅತ್ತಿಗೆ-ನಾದಿನಿ ಕಲಹದಿಂದ ನೀವು ಪಾರಾಗಬಹುದು. ಆ ಮೂಲಕ ಅಲ್ಲಾಹನ ಸಂಪ್ರೀತಿ ಮತ್ತು ಶ್ರೇಷ್ಠ ಪ್ರತಿಫಲಕ್ಕೆ ಅರ್ಹರಾಗಬಹುದು.

# ತಾಯ್ತನದ ಮಹಾತ್ಮೆ

ಸ್ತ್ರೀ ಪುರುಷರ ಪೈಕಿ ಯಾರು ಹೆಚ್ಚು ಉನ್ನತರು? ಕುರ್‌ಆನಿನ ದೃಷ್ಟಿಯಲ್ಲಿ ಈ ಪ್ರಶ್ನೆಯು ತೀರಾ ಬಾಲಿಶವಾಗಿದೆ. ಗೋರಟು ಅಥವಾ ಹೂವಿನ ಪೈಕಿ ಯಾವುದು ಶ್ರೇಷ್ಠವೆಂಬಂತೆಯೇ ನಿರರ್ಥಕ. ಸ್ತ್ರೀ ಪುರುಷರಲ್ಲಿ ದಂಪತಿಗಳೆಂಬ ನೆಲೆಯಲ್ಲಿ ಪುರುಷನಿಗೆ ನಾಯಕತ್ವ ಸ್ಥಾನವಿದೆ. ಕುಟುಂಬವು ಒಂದು ಸಂಸ್ಥೆಯಾಗಿದೆ. ಸಮಾಜದ ಒಂದು ಅತ್ಯಂತ ಚಿಕ್ಕ ಘಟಕ. ಸಮುದಾಯವೆಂಬುದು ಕುಟುಂಬಗಳ ಸಮೂಹವಲ್ಲವೇ?

ರಾಷ್ಟ್ರಕ್ಕೆ ಆಡಳಿತಗಾರ, ವಾರ್ಸಿಟಿಗೆ ವೈಸ್ ಛಾನ್ಸಲರ್, ಕಾಲೇಜಿಗೆ ಪ್ರಿನ್ಸಿಪಾಲ್ ಮತ್ತು ಶಾಲೆಗೆ ಹೆಡ್‌ಮಾಸ್ಟರ್ ಬೇಕು. ಮಾತ್ರವಲ್ಲ, ಕೇವಲ ಒಬ್ಬನೇ ಈ ಸ್ಥಾನದಲ್ಲಿರಬೇಕು. ದೇಶಕ್ಕೆ ಈರ್ವರು ಪ್ರಧಾನಿಗಳು ಮತ್ತು ಕಾಲೇಜಿಗೆ ಈರ್ವರು ಪ್ರಿನ್ಸಿಪಾಲರಿದ್ದರೆ ಜಗಳ ಅನಿವಾರ್ಯ. ಸಂಸ್ಥೆಯು ಬೆಳೆಯಲಾರದು ಅಥವಾ ಪ್ರಗತಿ ಸಾಧಿಸಲಾರದು ಮಾತ್ರವಲ್ಲ, ಸೊರಗಿ ಅಧಃಪತನ ಹೊಂದಬಹುದು. ಕುಟುಂಬದ ಸ್ಥಿತಿಯೂ ಅಷ್ಟೇ, ಈರ್ವರು ಯಜಮಾನರಿದ್ದರೆ ಅದು ನಾಶವಾಗುವುದು. ಆದ್ದರಿಂದ ಕುಟುಂಬಕ್ಕೆ ಯಾವಾಗಲೂ ನಾಯಕತ್ವ ನೀಡುವ ಓರ್ವ ಯಜಮಾನನಿರಬೇಕು. ಹೆರಿಗೆಯ ಸಂದರ್ಭದಲ್ಲಿಯಾದರೂ ಅದು ಸ್ತ್ರೀಯಿಂದ ಸಾಧ್ಯವಿಲ್ಲ. ಮನೆಯ ಯಜಮಾನನು ಕುಟುಂಬವನ್ನು ಹೊರ ಜಗತ್ತಿಗೆ ಜೋಡಿಸಿ ಬಾಹ್ಯರಂಗದ ಅಗತ್ಯ ಗಳನ್ನು ಪೂರೈಸಿ ವಿರೋಧ ಮತ್ತು ಆಕ್ರಮಣಗಳನ್ನು ಎದುರಿಸಬೇಕು. ಸ್ನೇಹಬಲ ಮತ್ತು ದೈಹಿಕ ಸ್ವಭಾವದ ವೈಶಿಷ್ಟ್ಯದಿಂದಾಗಿ ಸ್ತ್ರೀಗಿಂತ ಪುರುಷನೇ ಅದಕ್ಕೆ ಶಕ್ತ ನಾಗಿದ್ದಾನೆ. ಕುಟುಂಬದ ಭದ್ರತೆಯಂತೆಯೇ ಸಂರಕ್ಷಣೆಯೂ ಗೃಹಸ್ಥನ ಕರ್ತವ್ಯ ವಾಗಿದೆ. ಇದು ಹೆಣ್ಣಿಗಿಂತ ಹೆಚ್ಚಾಗಿ ಗಂಡಿಗೆ ಸಾಧ್ಯವಿದೆ. ಇಂಥ ಅನೇಕ ಕಾರಣ ಗಳಿಂದಾಗಿ ಕುರ್‌ಆನ್, ಕುಟುಂಬದ ನಾಯಕತ್ವದ ಸ್ಥಾನವನ್ನು ಪುರುಷನಿಗೆ ನೀಡಿದೆ.

ದಂಪತಿಗಳೆಂಬ ನೆಲೆಯಲ್ಲಿ ಪ್ರಥಮ ಸ್ಥಾನದಲ್ಲಿರುವ ಪುರುಷನು ತಂದೆ ತಾಯಿ ಗಳೆಂಬ ಸ್ಥಾನಕ್ಕೆ ತಲುಪಿದಾಗ 2ನೆಯ ಸ್ಥಾನಕ್ಕೆ ದೂಡಲ್ಪಡುತ್ತಾನೆ. ಕುರ್‌ಆನ್, ತಂದೆ-ತಾಯಿಯರೊಡನೆ ಸೌಜನ್ಯದಿಂದ ವರ್ತಿಸಬೇಕೆಂದು ಆದೇಶಿಸಿದ ಎರಡು ಕಡೆಗಳಲ್ಲಿ ಅವರಿಬ್ಬರ ವಿಷಯವನ್ನು ಹೇಳುವಾಗ ತಾಯಿಯ ತ್ಯಾಗವನ್ನು ಎತ್ತಿ ಹೇಳಿದೆ.

"ಮಾನವನಿಗೆ ತನ್ನ ಮಾತಾಪಿತರ ಹಕ್ಕನ್ನು ತಿಳಿದುಕೊಳ್ಳಲು ನಾವೇ ತಾಕೀತು ಮಾಡಿರುತ್ತೇವೆ. ಅವನ ತಾಯಿಯು ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿ ಅವನನ್ನು ತನ್ನ ಗರ್ಭದಲ್ಲಿರಿಸಿದಳು ಮತ್ತು ಅವನ ಸ್ತನಪಾನ ಬಿಡುವುದರಲ್ಲಿ ಎರಡು ವರ್ಷಗಳು ತಗಲಿದುವು. (ಆದುದರಿಂದಲೇ ನಾವು ಅವನೊಡನೆ) ನನಗೆ ಕೃತಜ್ಞತೆ ಸಲ್ಲಿಸು ಮತ್ತು ನಿನ್ನ ಮಾತಾಪಿತರಿಗೆ ಕೃತಜ್ಞತೆ ಸಲ್ಲಿಸು. ನೀನು ನನ್ನ ಕಡೆಗೇ ಮರಳಬೇಕಾಗಿದೆ (ಎಂದು ಉಪದೇಶಿಸಿದೆವು)." (ಪವಿತ್ರ ಕುರ್‌ಆನ್, 31:14)

"ತನ್ನ ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದು ನಾವು ಮಾನವನಿಗೆ ಆದೇಶಿಸಿದೆವು. ಅವನ ತಾಯಿಯು ಬಹಳ ಕಷ್ಟಪಟ್ಟು ಅವನನ್ನು ಗರ್ಭದಲ್ಲಿರಿಸಿದಳು ಮತ್ತು ಕಷ್ಟಪಟ್ಟೇ ಅವನನ್ನು ಹೆತ್ತಳು." (ಪವಿತ್ರ ಕುರ್‌ಆನ್, 46:15)

ತಾಯ್ತನವು ಭೂಮಿಯ ಅತ್ಯಂತ ಶ್ರೇಷ್ಠ ವಿಷಯವಾಗಿದೆ. ಅಮೆರಿಕದ ಮನಃ ಶಾಸ್ತ್ರಜ್ಞ ತಿಯೋಡರ್ ರೈಕ್, 'ಸ್ತ್ರೀ ಪುರುಷರ ನಡುವಣ ಭಾವನಾತ್ಮಕ ವೈವಿಧ್ಯತೆಗಳು' ಎಂಬ ಕೃತಿಯಲ್ಲಿ ತಾಯ್ತನದ ಕುರಿತು ಹೆಮ್ಮೆಪಡುವ ಓರ್ವ ಸ್ತ್ರೀಯ ಮಾತನ್ನು ಹೀಗೆ ಉದ್ಧರಿಸಿದ್ದಾರೆ. "ಬೌದ್ಧಿಕ ಹಾಗೂ ಇತರ ರಂಗಗಳಲ್ಲಿ ಪುರುಷರ ವೈಶಿಷ್ಟ್ಯಗಳನ್ನು ನಾವು ನಿಸ್ಸಂಕೋಚವಾಗಿ ಅಂಗೀಕರಿಸುತ್ತೇವೆ. ಆದರೆ ಸ್ತ್ರೀಯರಾದ ನಾವು ಅದಕ್ಕಿಂತ ಎಷ್ಟೋ ಪ್ರಮುಖವಾದಂಥ ಅನುಗ್ರಹವನ್ನು ಪಡೆದಿದ್ದೇವೆ. ನಾವಿಲ್ಲದಿದ್ದರೆ ಮಾನವ ಕುಲದ ಬೇರು ಕಡಿದು ಹೋಗಬಹುದು. ಮಕ್ಕಳಿಗೆ ನಾವು ಜನ್ಮ ನೀಡುತ್ತೇವೆ. ಆ ಮೂಲಕ ನಾವು ಮುಂದಿನ ಪೀಳಿಗೆಯ ಅಸ್ತಿತ್ವವನ್ನು ಖಾತ್ರಿಪಡಿಸುತ್ತೇವೆ."

ಪುರುಷನಿಗೆ ಗರ್ಭಧರಿಸಿ ಹೆರಲು ಸಾಧ್ಯವಿಲ್ಲ. ಅದಕ್ಕೆ ಸ್ತ್ರೀಯೇ ಬೇಕು. ಅದು ಹೆಣ್ಣಿನ ನೈಸರ್ಗಿಕ ನೀತಿ ಮತ್ತು ಕರ್ತವ್ಯವಾಗಿದೆ. ಗಂಡು ಎಷ್ಟೇ ಪ್ರಯತ್ನಿಸಿದರೂ ತಾಯಿಯಂತೆ ಮಗುವನ್ನು ಸಂರಕ್ಷಿಸಲು ಸಾಧ್ಯವಿಲ್ಲ. ಮೊಲೆಯುಣಿಸಿ ಮುದ್ದಿಸಿ ಲಾಲಿಸಿ ಬೆಳೆಸಲು ಆತನಿಂದ ಸಾಧ್ಯವಿಲ್ಲವಷ್ಟೆ. ಇದು ತಾಯ್ತನವೇ ಸ್ತ್ರೀಯ ಪ್ರಧಾನ ನೀತಿಯಾಗಿದೆಯೆಂದು ಸೂಚಿಸುತ್ತದೆ.

ಮಾನವನ ಜನನ ಮತ್ತು ಬೆಳವಣಿಗೆಯಲ್ಲಿ ತಾಯಿಯೇ ಪ್ರಧಾನ ಪಾತ್ರ ವಹಿಸಿ ಕಷ್ಟ ಅನುಭವಿಸುತ್ತಾಳೆ. ಬಹಳಷ್ಟು ಆಯಾಸ, ತಾಪತ್ರಯ, ಸಂಕಟಗಳನ್ನು ಸಹಿಸಿ ಗರ್ಭ ಧರಿಸುತ್ತಾಳೆ. ನೋವು ಸಹಿತ ಹೆರುತ್ತಾಳೆ. ತಮ್ಮ ಸುಖ ಸೌಲಭ್ಯಗಳನ್ನು ನಿರ್ಲಕ್ಷಿಸಿ ಮಕ್ಕಳನ್ನು ಪೋಷಿಸುತ್ತಾಳೆ. ಮಕ್ಕಳಿಗೆ ಅಸೌಖ್ಯವಾದರೆ ತಾಯಂದಿರು, ತಿನ್ನಲು, ಕುಡಿಯಲು, ಮಲಗಲು, ನಿದ್ರಿಸಲು ಮರೆಯುತ್ತಾರೆ. ಮಕ್ಕಳು ಎಚ್ಚೆತ್ತು ಅಳುವಾಗ ತಾಯಂದಿರು ನಡುರಾತ್ರಿಯಲ್ಲಿಯೂ ನಿದ್ರೆಯನ್ನು ತೊರೆಯುತ್ತಾರೆ. ವೃದ್ಧಾಪ್ಯದಿಂದ ಬಳಲುತ್ತಿರುವಾಗಲೂ ಹೆಚ್ಚಿನ ವೇಳೆಯಲ್ಲಿ ತಾಯಂದಿರು ತಮ್ಮ ಮಕ್ಕಳ ಆರೋಗ್ಯ ಮತ್ತು ಸ್ಥಿತಿಗತಿಗಳ ಬಗ್ಗೆ ಚಿಂತಿತರಾಗಿರುತ್ತಾರೆ. ಹೀಗೆ ಹೆಚ್ಚಿನ ತಾಯಂದಿರು ತಮಗಿಂತ

ಹೆಚ್ಚಾಗಿ ಮಕ್ಕಳ ಬಗ್ಗೆ ಕಾಳಜಿ ಹೊಂದಿರುತ್ತಾರೆ. ಇದು ಕೃತಕವಲ್ಲ. ಪರಿಸ್ಥಿತಿಗಳ ಒತ್ತಡದಿಂದಲೂ ಮಾಡುವುದಲ್ಲ. ತೀರಾ ನೈಸರ್ಗಿಕವಾಗಿದೆ.

ಮಕ್ಕಳ ಮನಸ್ಸು ಶೂನ್ಯವಾಗಿದೆ. ಬಹಳ ಶುದ್ಧವಾಗಿದೆ. ಬಿಳಿ ಕಾಗದದಂತೆ ಅದರಲ್ಲಿ ಬರೆದುದೆಲ್ಲವೂ ಎದ್ದು ತೋರುತ್ತದೆ. ನೋಡಿದ ಕೇಳಿದ ಎಲ್ಲವನ್ನು ಮಕ್ಕಳು ಅದೇ ರೀತಿಯಲ್ಲಿ ನಕಲು ಮಾಡುತ್ತಾರೆ. ಆದ್ದರಿಂದ ಪ್ರತಿಯೊಬ್ಬರ ಮೇಲೆಯೂ ತಾಯಿಯೇ ಅತ್ಯಧಿಕ ಪ್ರಭಾವ ಬೀರುತ್ತಾಳೆ. ವಿಶ್ವಾಸ, ಜೀವನ ದೃಷ್ಟಿಕೋನ, ಗುಣ, ನಡವಳಿಕೆ, ಸಂಸ್ಕೃತಿ ಇತ್ಯಾದಿ ಎಲ್ಲ ವಿಷಯಗಳಲ್ಲಿಯೂ ತಾಯಿಯ ಪಾತ್ರವು ಗಮನಾರ್ಹವಾಗಿರುತ್ತದೆ. ಆದ್ದರಿಂದಲೇ ಪೀಳಿಗೆಗಳನ್ನು ತಾಯಿ ಎಂಬ ಸ್ತ್ರೀಯೇ ರೂಪಿಸುತ್ತಾಳೆ. ಈ ನೀತಿ ಮತ್ತು ಕಾರ್ಯಭಾರವನ್ನು ಯಥಾ ಪ್ರಕಾರ ನಿರ್ವಹಿಸಿದಾಗ ಸ್ತ್ರೀಯೇ ಜಗತ್ತನ್ನು ನಿಯಂತ್ರಿಸಿ ಮುನ್ನಡೆಸುತ್ತಾಳೆ.

ಮನೆಯೇ ಪ್ರತಿಯೊಬ್ಬರ ಮೊದಲ ಪಾಠಶಾಲೆಯಾಗಿದೆ. ತಾಯಿಯೇ ಮೊದಲ ಗುರು. ಅವರಿಂದ ದೊರೆಯುವ ಜ್ಞಾನ, ನಡತೆ ಮತ್ತು ಅನುಭವಗಳು ಜೀವನದಾದ್ಯಂತ ಅನುಕೂಲ ಅಥವಾ ಪ್ರತಿಕೂಲ ಪ್ರಭಾವ ಬೀರುತ್ತದೆ. ಆದ್ದರಿಂದಲೇ ತಾಯಿ ಎಂಬ ಸ್ತ್ರೀಯು ಮಾನವಕುಲದ ಗುಣನಡತೆ ಮತ್ತು ದಿಕ್ಕನ್ನು ನಿರ್ಣಯಿಸುತ್ತಾಳೆ. ಈ ಹಿನ್ನೆಲೆಯಲ್ಲಿ ಸ್ತ್ರೀಯು ಸಮಾಜ ಮತ್ತು ಸಾರ್ವಜನಿಕ ಜೀವನವನ್ನು ಸಂಪೂರ್ಣವಾಗಿ ನಿಯಂತ್ರಿಸುವ ಶಕ್ತಿ ಕೇಂದ್ರವಾಗುತ್ತಾಳೆ. ಕುರ್‌ಆನ್ ಅದನ್ನೇ ಬಯಸಿದೆ.

ತಾಯ್ತನದ ಕಾರ್ಯಭಾರದಿಂದ ಸ್ತ್ರೀಯನ್ನು ದೂರ ಸರಿಸುವುದು ತೀರಾ ಅನೈಸರ್ಗಿಕ ಮತ್ತು ಪ್ರಪಂಚ ವ್ಯವಸ್ಥೆಯ ವಿರುದ್ಧ ಸಮರವಾಗಿದೆ. ಅದು ಮಾನವ ಸಮಾಜವನ್ನು ಮಹಾ ವಿನಾಶ ಮತ್ತು ದುರಂತಕ್ಕೆ ದೂಡುತ್ತದೆ. ಆದ್ದರಿಂದಲೇ ಖ್ಯಾತ ದಾರ್ಶನಿಕ ರುಸ್ಸೋ ಹೀಗೆ ವಿನಂತಿಸಿದ್ದಾನೆ, "ಎಲ್ಲರನ್ನೂ ನೀವು ತಂತಮ್ಮ ಕಾರ್ಯಭಾರಕ್ಕೆ ಮರಳಿಸ ಬಯಸುವುದಿದ್ದರೆ ಅದನ್ನು ತಾಯಿಯಿಂದ ಆರಂಭಿಸಿರಿ. ಅದು ಮಾಡುವ ಬದಲಾವಣೆಯು ನಿಮ್ಮನ್ನು ಆಶ್ಚರ್ಯಚಕಿತಗೊಳಿಸಬಹುದು. ಈ ಪ್ರಥಮ ಪಥಭ್ರಷ್ಟತೆಯಿಂದಲೇ ಎಲ್ಲ ನಾಶಗಳೂ ಸಂಭವಿಸುತ್ತವೆ."

ಇಂದು ಜಗತ್ತಿನಲ್ಲಿ ಮಾನವನೇ ಅತಿ ಅಗ್ಗದ ವಸ್ತು. ಆದ್ದರಿಂದ ಆತನಿಗೆ ಜನ್ಮ ನೀಡುವ ಮಾತೃತ್ವದ ಬೆಲೆಯೂ ಕುಸಿದಿದೆ. ತಾಯ್ತನದ ಶ್ರೇಷ್ಠತೆಯ ಕುರಿತು ಸ್ತ್ರೀಯೂ ಇಂದು ಅಜ್ಞಳಾಗಿದ್ದಾಳೆ. ನಾನು ಇಂತಿಷ್ಟು ಮಕ್ಕಳನ್ನು ಗರ್ಭಧರಿಸಿ ಹೆತ್ತು ಹೊತ್ತು ಸಾಕಿ ಸಲಹಿದೆ ಎಂದು ಅಭಿಮಾನದಿಂದ ಹೇಳುವ ಸ್ತ್ರೀಯರು ಇಂದಿನ ಸಮಾಜದಲ್ಲಿ ತೀರಾ ದುರ್ಲಭ. ತಾಯ್ತನವು ಹೊಟೇಲಿನ ಸ್ವಾಗತಗಾರಿಕೆಯ ಉದ್ಯೋಗಕ್ಕಿಂತ ನಿಕೃಷ್ಟ ಮತ್ತು ಕ್ಯಾಬರೆ ನರ್ತಕಿಯ ಪದವಿಗಿಂತ ತುಚ್ಛವೆಂದು ಭಾವಿಸಲಾಗುತ್ತಿದೆ. ಇಂದು ಹೆಚ್ಚಿನವರಿಗೆ ಮಾನವ ಮಕ್ಕಳ ಬಗ್ಗೆ ತಾತ್ಸಾರ. ಆದ್ದರಿಂದಲೇ ಗರ್ಭ ಧರಿಸಲು ಸಂಕೋಚ. ಹೆರಿಗೆಯಾದರೆ ಸೌಂದರ್ಯ ಸೋರಿ ಹೋದೀತೆಂಬ ಅಂಜಿಕೆ. ಜತೆಯಲ್ಲಿರುವ ಹೆಣ್ಣಿಗೆ ಮಕ್ಕಳಾಗುವುದು ಪುರುಷನಿಗೂ ಅರೋಚಕ. ಮಧ್ಯರಾತ್ರಿಯಲ್ಲಿ ಕಿಟಾರನೆ ಕಿರುಚುವ

ಮಗು, ಸಿಹಿ ನಿದ್ರೆಯನ್ನು ಭಂಗಗೊಳಿಸುವ ಪೀಡೆಯೇ ಸರಿ. ಈ ಮನೋಭಾವವೇ ತಾಯ್ತನದ ಘನತೆಯನ್ನು ಕುಗ್ಗಿಸಿ ಅಪಮೌಲ್ಯಗೊಳಿಸಲು ಕಾರಣವಾಗಿದೆ.

ಮಾನವರಿಗೆ ಜನ್ಮ ನೀಡುವ ತಾಯ್ತನವೇ ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠವೆಂದು ಇಸ್ಲಾಮ್ ಕಲಿಸುತ್ತದೆ. ತಾಯಿ ಎಂಬ ಸ್ತ್ರೀಯೇ ಜಗತ್ತಿನಲ್ಲಿ ಅತ್ಯಂತ ಗೌರವಕ್ಕೆ ಅರ್ಹಳು. ಒಬ್ಬರು ಪ್ರವಾದಿಯವರೊಡನೆ(ಸ) ಕೇಳಿದರು, "ದೇವ ಸಂದೇಶವಾಹಕರೇ! ನನ್ನ ಅತ್ಯುತ್ತಮ ಸೌಜನ್ಯಕ್ಕೆ ಯಾರು ಅರ್ಹರು?" ಪ್ರವಾದಿ ಹೇಳಿದರು, "ನಿನ್ನ ತಾಯಿ." "ಆ ಬಳಿಕ ಯಾರು?" ಅವರು ಕೇಳಿದರು. "ನಿನ್ನ ತಾಯಿ." ಪ್ರವಾದಿ ಉತ್ತರಿಸಿದರು. ಅವರು ಪುನಃ ಕೇಳಿದರು, "ಅನಂತರ ಯಾರು?" "ನಿನ್ನ ತಾಯಿಯೇ" ಪ್ರವಾದಿ(ಸ) ತಿಳಿಸಿದರು. ಅವರು ಮತ್ತೆ ಕೇಳಿದರು, "ಆ ಬಳಿಕ ಯಾರು?" ಪ್ರವಾದಿ(ಸ) ಹೇಳಿದರು, "ನಿನ್ನ ತಂದೆ."

ಪವಿತ್ರ ಕುರ್‌ಆನಿನ ವಿವರಣೆಯಲ್ಲಿಯೂ ತಾಯ್ತನಕ್ಕೆ ವಿಶೇಷ ಗಮನ ನೀಡಲಾಗಿದೆ. ಆದ್ದರಿಂದ ಮಾನವ ಭೂಮಿಯಲ್ಲಿ ತಾಯಿಯನ್ನು ಅತ್ಯಧಿಕ ಗೌರವಿಸಿ ಅನುಸರಿಸಬೇಕು.

ಕೇವಲ ಅಧಮರು ಮತ್ತು ಅತ್ಯಂತ ನೀಚರು ಮಾತ್ರ ತಾಯಂದಿರನ್ನು ಅಗೌರವಿಸಿ ಧಿಕ್ಕರಿಸಬಹುದು. ಮಾನವೀಯತೆಯಿರುವವರಿಗೆ ತಾಯಿಯನ್ನು ಗೌರವಿಸದಿರಲು ಸಾಧ್ಯವಿಲ್ಲ.

ಱಱಱ

# ಹಾಲುಣಿಸುವ ತಾಯಿ

ತಾಯಿಯು ಕರುಣೆ ತುಂಬಿದ ಕೊಡವಾಗಿದ್ದಾಳೆ. ತಾಳ್ಮೆ-ಸಂಯಮದ ಮಾನವ ರೂಪ. ತಾಯಿಯು ಎದೆಯಿಂದ ಹಾಲು ಸುರಿಸುವ, ಮನಸ್ಸಿನಿಂದ ಮಮತೆ ಸೂಸುವ ಮಹಾ ವಿಸ್ಮಯವಾಗಿದ್ದಾಳೆ. ಪುಟ್ಟ ಮಗು ತಾಯಿಯ ಮೊಲೆಹಾಲು ಚೀಪುತ್ತದೆ. ಮುಖದಿಂದ ಜೀವನದ ಮೊದಲ ಅಕ್ಷರಗಳನ್ನು ಓದುತ್ತದೆ. ಮಗುವಿಗೆ ಪ್ರೀತಿ ಕರುಣೆಯಂತೆಯೇ ಮೊಲೆಹಾಲು ನೀಡಬೇಕೆಂದು ಕುರ್‌ಆನ್ ಹೇಳುತ್ತದೆ. ಅದು ಸ್ತ್ರೀಯನ್ನು ಮೊಲೆಯುಣಿಸುವ ತಾಯಿಯೆಂಬ ನೆಲೆಯಲ್ಲಿ ಪರಿಚಯಪಡಿಸುತ್ತದೆ.

"ಮಾನವನಿಗೆ ತನ್ನ ಮಾತಾಪಿತರ ಹಕ್ಕನ್ನು ತಿಳಿದುಕೊಳ್ಳಲು ನಾವೇ ತಾಕೀತು ಮಾಡಿರುತ್ತೇವೆ. ಅವನ ತಾಯಿಯು ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿ ಅವನನ್ನು ತನ್ನ ಗರ್ಭದಲ್ಲಿರಿಸಿದಳು ಮತ್ತು ಅವನ ಸ್ತನಪಾನ ಬಿಡುವುದರಲ್ಲಿ ಎರಡು ವರ್ಷಗಳು ತಗಲಿದುವು. (ಆದುದರಿಂದಲೇ ನಾವು ಅವನೊಡನೆ) ನನಗೆ ಕೃತಜ್ಞತೆ ಸಲ್ಲಿಸು ಮತ್ತು ನಿನ್ನ ಮಾತಾಪಿತರಿಗೆ ಕೃತಜ್ಞತೆ ಸಲ್ಲಿಸು. ನೀನು ನನ್ನ ಕಡೆಗೇ ಮರಳಬೇಕಾಗಿದೆ (ಎಂದು ಉಪದೇಶಿಸಿದೆವು)." (ಪವಿತ್ರ ಕುರ್‌ಆನ್, 31:14)

"ತನ್ನ ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದು ನಾವು ಮಾನವನಿಗೆ ಆದೇಶಿಸಿದೆವು. ಅವನ ತಾಯಿಯು ಬಹಳ ಕಷ್ಟಪಟ್ಟು ಅವನನ್ನು ಗರ್ಭದಲ್ಲಿರಿಸಿದಳು ಮತ್ತು ಕಷ್ಟಪಟ್ಟೇ ಅವನನ್ನು ಹೆತ್ತಳು. ಅವನ ಗರ್ಭಾವಧಿಯಲ್ಲಿ ಮತ್ತು ಮೊಲೆಹಾಲು ಬಿಡಿಸುವುದರಲ್ಲಿ ಮೂವತ್ತು ತಿಂಗಳುಗಳು ತಗಲಿದವು."

(ಪವಿತ್ರ ಕುರ್‌ಆನ್, 46:15)

ಮೊಲೆಯುಣ್ಣುವ ಮಗುವಿನೊಂದಿಗೆ ತಾಯಿಯ ಸಂಬಂಧವು ಅತ್ಯಂತ ಸುದೃಢ ಮತ್ತು ಗಾಢವಾಗಿದೆಯೆಂದು ಕುರ್‌ಆನ್ ಕಲಿಸುತ್ತದೆ. ಅಂತ್ಯ ದಿನದ ಭಯಾನಕತೆಯನ್ನು ವಿವರಿಸುತ್ತಾ, 'ಮೊಲೆಯುಣ್ಣುವ ಮಗುವನ್ನು ತಾಯಿಯು ಮರೆತು ಬಿಡುವ ದಿನ' ಎಂದು ಕುರ್‌ಆನ್ ವರ್ಣಿಸಿದೆ.

"ಜನರೇ ನಿಮ್ಮ ಪ್ರಭುವಿನ ಕ್ರೋಧವನ್ನು ಭಯಪಡಿರಿ. ವಾಸ್ತವದಲ್ಲಿ ಪುನರುತ್ಥಾನದ ಘಳಿಗೆಯ ಮಹಾಕಂಪನವು (ಭಯಾನಕ) ವಿಷಯವಾಗಿದೆ. ನೀವು ಅದನ್ನು ಕಾಣುವಂದು ಹಾಲುಣಿಸುವವಳು ಹಾಲುಣ್ಣುವ ತನ್ನ ಶಿಶುವನ್ನು ಮರೆತು ಬಿಡುವಳು. ಪ್ರತಿಯೊಬ್ಬ ಗರ್ಭಿಣಿಗೆ ಗರ್ಭಪಾತವಾಗಿ ಬಿಡುವುದು." (ಪವಿತ್ರ ಕುರ್‌ಆನ್, 22:1-2)

ಕುರ್‌ಆನಿನ ದೃಷ್ಟಿಯಲ್ಲಿ ಗರ್ಭ ಧರಿಸಿ ಹೆರುವಂತೆಯೇ ಮೊಲೆಯುಣಿಸುವಿಕೆಯೂ ಅತಿ ಪ್ರಧಾನವಾಗಿದೆ. ಮೊಲೆಯುಣಿಸುವ ಸಾಕು ತಾಯಿಯು ಹೆತ್ತ ತಾಯಿಗೆ ಸಮಾನವೆಂದು ಅದು ಕಲಿಸುತ್ತದೆ. ಹೆರಿಗೆಯಿಂದ ಸ್ಥಾಪನೆಯಾಗುವಂಥ ಸಂಬಂಧವು ಮೊಲೆಯುಣ್ಣುವಿಕೆಯಿಂದಲೂ ಉಂಟಾಗುತ್ತದೆ. ಆದ್ದರಿಂದ ಇಸ್ಲಾಮಿನಲ್ಲಿ ಮೊಲೆ ಹಾಲು ಸಂಬಂಧವು ರಕ್ತ ಸಂಬಂಧಕ್ಕೆ ಸಮಾನವಾಗಿದೆ. ವಿವಾಹ ಸಂಬಂಧ ನಿಷಿದ್ಧರಾದವರನ್ನು ವಿವರಿಸುತ್ತಾ ಕುರ್‌ಆನ್ ಹೇಳುತ್ತದೆ:

"ನಿಮಗೆ ಈ ಸ್ತ್ರೀಯರು ವಿವಾಹಕ್ಕೆ ನಿಷಿದ್ಧರು:- ನಿಮ್ಮ ಮಾತೆಯರು, ಪುತ್ರಿಯರು, ಸಹೋದರಿಯರು, ಸೋದರತ್ತೆಯರು, ತಾಯಿಯ ಸೋದರಿಯರು, ಸೋದರ ಪುತ್ರಿಯರು, ಸೋದರಿ ಪುತ್ರಿಯರು, ನಿಮಗೆ ಮೊಲೆಹಾಲುಣಿಸಿದ ಸಾಕು ತಾಯಂದಿರು, ನಿಮ್ಮೊಂದಿಗೆ ಸ್ತನಪಾನ ಸಂಬಂಧವಿರುವ ಸೋದರಿಯರು, ನಿಮ್ಮ ಪತ್ನಿಯರ ತಾಯಂದಿರು ನಿಮ್ಮ ಮಡಿಲಲ್ಲಿ ಪೋಷಣೆ ಪಡೆದಿರುವ ನಿಮ್ಮ ಪತ್ನಿಯ ಪುತ್ರಿಯರು, ಯಾವ ಪತ್ನಿಯರೊಂದಿಗೆ ನೀವು ಸಂಭೋಗ ಮಾಡಿರುವಿರೋ ಅವರ ಪುತ್ರಿಯರು, ಆದರೆ (ಬರೇ ನಿಕಾಹ್ ಆಗಿದ್ದು) ನೀವು ಸಂಭೋಗ ಮಾಡಿರದಿದ್ದರೆ (ಅವರನ್ನು ಬಿಟ್ಟು ಅವರ ಪುತ್ರಿಯರನ್ನು ವಿವಾಹ ಮಾಡಿಕೊಳ್ಳುವುದರಲ್ಲಿ) ದೋಷವಿಲ್ಲ. ನಿಮ್ಮ ಸ್ವಂತ ಪುತ್ರರ ಪತ್ನಿಯರೂ ನಿಮಗೆ ನಿಷಿದ್ಧ. ಒಂದು ವಿವಾಹ ಬಂಧನದಲ್ಲಿ ಇಬ್ಬರು ಸಹೋದರಿಯನ್ನಿರಿಸಿಕೊಳ್ಳುವುದೂ ನಿಷಿದ್ಧವಾಗಿದೆ. ಆದರೆ ಹಿಂದೆ ಆದುದು ಆಗಿ ಹೋಯಿತು. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಿಸುವವನೂ ಕೃಪೆದೋರುವವನೂ ಆಗಿರುತ್ತಾನೆ."

(ಪವಿತ್ರ ಕುರ್‌ಆನ್, 4:23)

ಇಲ್ಲಿ ಹೆತ್ತ ತಾಯಂದಿರನ್ನೂ ಮೊಲೆಯುಣಿಸಿದವರನ್ನೂ ರಕ್ತ ಸಂಬಂಧದ ಸಹೋದರಿಯರನ್ನೂ ಮೊಲೆಹಾಲು ಸಂಬಂಧದ ಸಹೋದರಿಯರನ್ನು ಕುರ್‌ಆನ್ ಒಂದೇ ಬಣದಲ್ಲಿ ಸೇರಿಸಿದೆ. ಇದರಿಂದ ಮೊಲೆಯುಣಿಸುವುದಕ್ಕೆ ಇಸ್ಲಾಮ್ ನೀಡಿರುವ ಮಹತ್ವ ವ್ಯಕ್ತವಾಗುತ್ತದೆ.

ಮೊಲೆಯುಣಿಸುವಿಕೆಯನ್ನು ಶ್ರೇಷ್ಠ ಕೆಲಸ ಮತ್ತು ಘನ ಕರ್ತವ್ಯವೆಂದು ಕುರ್‌ಆನ್ ಪರಿಗಣಿಸಿದೆ. ಆದ್ದರಿಂದಲೇ ವಿವಾಹ ವಿಚ್ಛೇದಿತೆಯು ಮಗುವಿಗೆ ಮೊಲೆಯುಣಿಸಿದರೆ ಆಕೆಗೆ ವೇತನ ನೀಡಬೇಕೆಂದು ಕುರ್‌ಆನ್ ಆದೇಶಿಸಿದೆ:

"(ಇದ್ದತ್‌ನ ಅವಧಿಯಲ್ಲಿ) ಅವರನ್ನು, ನೀವಿರುವ ಸ್ಥಳದಲ್ಲೇ ನಿಮ್ಮ ಸೌಲಭ್ಯಕ್ಕನುಸಾರವಾಗಿ ವಾಸಗೊಳಿಸಿರಿ- ಮತ್ತು ಅವರಿಗೆ ಬೇಸರವುಂಟು ಮಾಡಲಿಕ್ಕಾಗಿ ಅವರನ್ನು ಸತಾಯಿಸಬೇಡಿರಿ. ಅವರು ಗರ್ಭಿಣಿಯರಾಗಿದ್ದರೆ, ಅವರ ಪ್ರಸವ ಕಾಲದವರೆಗೂ ಅವರಿಗಾಗಿ ಖರ್ಚು ಮಾಡುತ್ತಲಿರಿ. ಅನಂತರ ಅವರು ನಿಮಗೋಸ್ಕರ (ಶಿಶುವಿಗೆ) ಸ್ತನಪಾನ ಮಾಡಿಸಿದರೆ, ಅವರಿಗೆ ಅವರ ಸಂಭಾವನೆ ಕೊಡಿರಿ ಮತ್ತು (ಸಂಭಾವನೆಯ ವಿಷಯವನ್ನು) ಪರಸ್ಪರ ಮಾತುಕತೆಯ ಮೂಲಕ ಉತ್ತಮ ರೀತಿಯಲ್ಲಿ

ತೀರ್ಮಾನಿಸಿಕೊಳ್ಳಿರಿ. ಆದರೆ ನೀವು (ಸಂಭಾವನೆ ನಿಶ್ಚಯಿಸುವ ವಿಷಯದಲ್ಲಿ) ಪರಸ್ಪರರಿಗೆ ತೊಂದರೆ ಕೊಟ್ಟರೆ ಶಿಶುವಿಗೆ ಬೇರೊಬ್ಬ ಸ್ತ್ರೀಯ ಸ್ತನಪಾನ ಮಾಡಿಸಲಿ."

(ಪವಿತ್ರ ಕುರ್‌ಆನ್, 65:6)

ಮಗುವಿನ ಮೊಲೆಹಾಲು ಪ್ರಾಯವು 2 ವರ್ಷಗಳೆಂದು ಕುರ್‌ಆನ್ ಕಲಿಸಿದೆ. ವಿವಾಹ ವಿಚ್ಛೇದಿತೆಯರ ಕುರಿತು ಕುರ್‌ಆನ್ ಹೇಳುತ್ತದೆ:

"ತಮ್ಮ ಶಿಶುಗಳು ಪೂರ್ಣ ಸ್ತನಪಾನಾವಧಿಯ ವರೆಗೆ ಹಾಲು ಕುಡಿಯಬೇಕೆಂದು ಪಿತರು ಬಯಸಿದರೆ, ತಾಯಂದಿರು ತಮ್ಮ ಶಿಶುಗಳಿಗೆ ಎರಡು ವರ್ಷ ಪೂರ್ತಿಯಾಗಿ ಹಾಲುಣಿಸಬೇಕು. ಆಗ ಶಿಶುವಿನ ತಂದೆಯು ಅವರಿಗೆ ನ್ಯಾಯೋಚಿತ ರೀತಿಯಿಂದ ಅನ್ನ, ಬಟ್ಟೆ ಕೊಡಲು ಬಾಧ್ಯಸ್ಥನಾಗುವನು. ಆದರೆ ಅವನವನ ಶಕ್ತಿಗಿಂತ ಮೀರಿದ ಭಾರವನ್ನು ಯಾರ ಮೇಲೂ ಹಾಕಬಾರದು. ಶಿಶುವು ತಾಯಿಯದ್ದು ಎಂಬ ಕಾರಣದಿಂದ ಅವಳನ್ನು ಕಷ್ಟಕ್ಕೊಳಪಡಿಸಬಾರದು ಮತ್ತು ಶಿಶುವಿನ ತಂದೆಯೆಂಬ ಕಾರಣದಿಂದ ಅವನನ್ನೂ ಪೇಚಾಟಕ್ಕೊಳಪಡಿಸಬಾರದು. ಮೊಲೆಹಾಲನ್ನುಣಿಸುವವಳ ಈ ಹಕ್ಕು ತಂದೆಯ ಮೇಲಿರು ವಂತೆಯೇ ಅವನ ವಾರೀಸುದಾರರ ಮೇಲೂ ಇದೆ. ಆದರೆ ಉಭಯತ್ರರು ಪರಸ್ಪರ ವಿಚಾರ ವಿನಿಮಯದಿಂದ ಒಮ್ಮತರಾಗಿ ಮೊಲೆಹಾಲನ್ನು ಬಿಡಿಸಲಿಚ್ಛಿಸುವುದರಲ್ಲಿ ತಪ್ಪಿಲ್ಲ ಮತ್ತು ನಿಮ್ಮ ಶಿಶುಗಳಿಗೆ ಅನ್ಯ ಸ್ತ್ರೀಯಿಂದ ಸ್ತನಪಾನ ಮಾಡಿಸುವ ಇರಾದೆ ನಿಮಗಿದ್ದರೆ, ಅದಕ್ಕೆ ಪ್ರತಿಫಲವನ್ನು ನಿಶ್ಚಯಿಸಿ ಅದನ್ನು ನ್ಯಾಯೋಚಿತವಾಗಿ ಪಾವತಿ ಮಾಡಿದರೆ ಅದರಲ್ಲೂ ತಪ್ಪಿಲ್ಲ. ಅಲ್ಲಾಹನನ್ನು ಭಯಪಡಿರಿ. ನೀವು ಮಾಡುವುದೆಲ್ಲವೂ ಅಲ್ಲಾಹನ ವೀಕ್ಷಣದೊಳಗಿದೆ ಎಂಬುದನ್ನು ನೀವು ತಿಳಿದಿರಬೇಕು." (ಪವಿತ್ರ ಕುರ್‌ಆನ್, 2:233)

ತಾಯಿಯು ಮಗುವಿಗೆ ಮೊಲೆಯುಣಿಸುವಾಗ ದೇಹಕ್ಕೆ ಪೋಷಕಾಂಶ ನೀಡುವುದರೊಂದಿಗೆ ಅನಂತ ವಾತ್ಸಲ್ಯದ ಲೋಕವು ಅದರ ಮುಂದೆ ತೆರೆಯಲ್ಪಡುತ್ತದೆ. ಏಕಾಗ್ರಚಿತ್ತದಿಂದ, ಸಹಜ ಭಾವನೆಯಿಂದ ಮೊಲೆಯುಣಿಸುವ ತಾಯಿಯ ಮುಖದ ಭಾವನೆಗಳನ್ನು ಓದಲು ಯಾರಿಂದ ಸಾಧ್ಯ? ಅದನ್ನು ಮಾತುಗಳಿಂದ ವಿವರಿಸಲು ಸಾಧ್ಯವಿಲ್ಲ. ಗೆರೆಗಳಲ್ಲಿ ಮೂಡಿಸಲೂ ಅಸಾಧ್ಯ.

ಆದರೆ ಇಂದು ಎಲ್ಲವೂ ಬುಡಮೇಲಾಗಿದೆ. ಯಾಕೆಂದರೆ ನಮ್ಮದು ವ್ಯಾಪಾರೀ ಸಂಸ್ಕೃತಿಯ ಲೋಕವಾಗಿದೆ. ಎಲ್ಲವೂ ವ್ಯಾಪಾರೀಕರಣಗೊಂಡಿದೆ. ಎಲ್ಲ ವಿಷಯ ಗಳನ್ನು ಕೂಡಿಸಿ ಕಳೆದು ಲಾಭ ನಷ್ಟ ನೋಡಿ ನಿರ್ಣಯಿಸಲಾಗುತ್ತದೆ. ಆದ್ದರಿಂದ ಅಂಕೆಗಳ ಆಧಿಪತ್ಯ. ಕಾರುಣ್ಯ ತುಂಬಿದ ಕೊಡವಾಗಬೇಕಾದ ತಾಯಿಯೂ ಇಂದು ಅದಕ್ಕೆ ಹೊರತಲ್ಲ. ತನ್ನ ಗರ್ಭಾಶಯದಲ್ಲಿ ರೂಪುಗೊಳ್ಳುತ್ತಿರುವ ಮಗು, ಹೊರ ಜಗತ್ತನ್ನು ನೋಡಬೇಕೇ-ಬೇಡವೇ, ಹುಟ್ಟಿದ ಮಗು ಬದುಕಬೇಕೋ-ಬೇಡವೋ ಇತ್ಯಾದಿ ಗಳನ್ನು ಭವಿಷ್ಯದಲ್ಲಿ ಆ ಮಗುವಿನಿಂದ ದೊರೆಯಬಹುದಾದ ಆರ್ಥಿಕ ಲಾಭ ಅಥವಾ ನಷ್ಟಗಳನ್ನು ಲೆಕ್ಕ ಹಾಕಿಯೇ ನಿರ್ಧರಿಸಲಾಗುತ್ತದೆ.

ಗ್ರಾಹಕ ಸಂಸ್ಕೃತಿಯು ಬೆಳೆಸಿದ ಭೋಗಾಸಕ್ತಿಯು ತಾಯಿಯ ಮನಸ್ಸಿನ ಕರುಣೆಯನ್ನು ನಂದಿಸಿಬಿಟ್ಟಿವೆ. ಸ್ತ್ರೀಯ ಹೃದಯವು ಪ್ರೀತಿ ವಾತ್ಸಲ್ಯದ ಭಾವನೆಗಳಿಲ್ಲದೆ ಬರಡಾಗಿದೆ. ಆದ್ದರಿಂದ ಟೆಲಿ ಸೀರಿಯಲ್ ನೋಡುತ್ತಿರುವ ತಾಯಿಗೆ ಮಗು ಅತ್ತರೆ ಕೋಪ ಬರುತ್ತದೆ. ಹಠ ನಿಲ್ಲಿಸಲಿಕ್ಕಾಗಿ ಆ ಮಗುವಿಗೆ ಹಾಲುಣಿಸುವುದಿದ್ದರೆ ಅದು ಕೇವಲ ನಳ್ಳಿಯಿಂದ ನೀರು ಬಿಟ್ಟಂತೆ ನಿರ್ಲಿಪ್ತವಾಗಿರುವುದು. ಮಲಮೂತ್ರ ವಿಸರ್ಜನೆ ಮಾಡಿ ಮಲಿನಗೊಳಿಸಿದರೆ ಆ ಮಗುವನ್ನು ಓರ್ವ ಕಾರ್ಮಿಕನು ಯಂತ್ರವನ್ನು ತೊಳೆದು ಶುಚಿಗೊಳಿಸಿದಂತೆ ಭಾವ ರಹಿತವಾಗಿರುವುದು. ಯಾಕೆಂದರೆ ಎಲ್ಲ ಭಾವನೆಯೂ ಟೆಲಿ ಸೀರಿಯಲ್‌ನ ಕಥಾ ಪಾತ್ರಗಳಲ್ಲಿಯೇ ಕೇಂದ್ರೀಕೃತವಾಗಿರುವುದಲ್ಲವೇ.

ಸೌಂದರ್ಯವು ಸೋರಿ ಹೋಗುವುದೆಂಬ ಭೀತಿಯಿಂದ ಮಗುವಿಗೆ ಮೊಲೆಯುಣಿಸಲು ನಿರಾಕರಿಸುವ ತಾಯಂದಿರು ಇಂದು ಧಾರಾಳವಾಗಿದ್ದಾರೆ. ಮಗುವಿಗೆ ಮೊಲೆ ಹಾಲು ನೀಡದೆ ಬಾಟ್ಲಿ ಹಾಲು ಕೊಡಲು ಆಯಾಳನ್ನು ನೇಮಿಸಿ ಮನೆಯಿಂದ ಹೊರ ಹೋಗುವವರೂ ಆಧುನಿಕ ಸಮಾಜದಲ್ಲಿ ವಿರಳವೇನಲ್ಲ. ಮೊಲೆಯುಣಿಸುವಿಕೆಯೂ ಸೇರಿದಂತೆ ಮಗುವಿನ ಸಂರಕ್ಷಣೆಯು ತಾಯಿಯ ನೈಸರ್ಗಿಕ ಕರ್ತವ್ಯವಾಗಿದೆ. ಸ್ತ್ರೀಯನ್ನು ಅದರಿಂದ ಬೇರ್ಪಡಿಸಿದರೆ ಗಂಭೀರ ಸಮಸ್ಯೆಗಳು ಹುಟ್ಟಿಕೊಳ್ಳಬಹುದು. ಹೊಸ ಪೀಳಿಗೆಯಲ್ಲಿ ಕಾಣಿಸುವ ಭಾವನಾತ್ಮಕ ಮತ್ತು ಸ್ವಾಭಾವಿಕ ವೈಕಲ್ಯಗಳಿಂದಾಗಿ ಸ್ತ್ರೀಯನ್ನು ತಾಯ್ತನವೆಂಬ ಉನ್ನತ ಸ್ಥಾನದಿಂದ ವಜಾಗೊಳಿಸಲಾಗಿದೆ. 70 ವರ್ಷಗಳ ಕಾಲ ಸ್ತ್ರೀಯನ್ನು ಕುಟುಂಬದ ಕೇಂದ್ರ ಸ್ಥಾನದಿಂದ ದೂರವಿರಿಸಿದ್ದರಿಂದ ಸೋವಿಯತ್ ಸಮಾಜದಲ್ಲಿ ಸಂಭವಿಸಿದ ಅಧಃಪತನವನ್ನು ಅಲ್ಲಿನ ಆಡಳಿತಗಾರನಾಗಿದ್ದ ಮಿಖಾಯಿಲ್ ಗೋರ್ಬಚೆವ್ ತಮ್ಮ 'ಪೆರಿಸ್ಟ್ರೋಯಿಕಾ'ದಲ್ಲಿ ಹೀಗೆ ವಿವರಿಸಿದ್ದಾರೆ: ನಮ್ಮ ಸಂಕೀರ್ಣ ಮತ್ತು ವೀರೋಚಿತ ಇತಿಹಾಸದ ವರ್ಷಗಳಲ್ಲಿ ತಾಯಿ ಮತ್ತು ಗೃಹಿಣಿಯೆಂಬ ನೆಲೆಯಲ್ಲಿ ಮಕ್ಕಳಿಗೆ ಶಿಕ್ಷಣ ಕೊಡಿಸುವ ಅನಿವಾರ್ಯ ಕೆಲಸದಲ್ಲಿಯೂ ಸ್ತ್ರೀಯರಿಂದ ಕೇಳಿ ಬರುವ ಸ್ತ್ರೀಯರ ವಿಶೇಷ ಹಕ್ಕು ಮತ್ತು ಬೇಡಿಕೆಗಳ ನಿರ್ವಹಣೆಯಲ್ಲಿ ನಾವು ವಿಫಲರಾದೆವು. ವೈಜ್ಞಾನಿಕ ಸಂಶೋಧನೆಗಳಲ್ಲಿ ನಿರತರಾಗಿ; ಕಾರ್ಖಾನೆ, ಕೈಗಾರಿಕೆ, ಸೇವಾ ರಂಗಗಳಲ್ಲಿ ದುಡಿದು; ಕಲಾತ್ಮಕ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರಿಂದ ಸ್ತ್ರೀಯರಿಗೆ ಮನೆಯಲ್ಲಿ ಅವರ ದೈನಂದಿನ ಕೆಲಸ, ಮಕ್ಕಳ ಪಾಲನೆ, ಉತ್ತಮ ಕುಟುಂಬ ನಿರ್ಮಾಣ ಇತ್ಯಾದಿಗಳಿಗೆ ಸಾಕಷ್ಟು ಬಿಡುವು ದೊರೆಯಲಿಲ್ಲ. ನಮ್ಮ ಅನೇಕ ಸಮಸ್ಯೆಗಳಿಗೆ ನಮ್ಮ ಮಕ್ಕಳ ಮತ್ತು ಯುವಜನರ ವರ್ತನೆ ಹಾಗೂ ನಮ್ಮ ನೈತಿಕ, ಸಾಂಸ್ಕೃತಿಕ ಮತ್ತು ಉತ್ಪಾದನೆಯಲ್ಲಿರುವ ಸಮಸ್ಯೆಗಳಿಗೆ-ಆಂಶಿಕವಾಗಿ ದುರ್ಬಲಗೊಂಡಿರುವ ಕುಟುಂಬ ಸಂಬಂಧ, ಕೌಟುಂಬಿಕ ಹೊಣೆಗಾರಿಕೆಯ ಬಗೆಗಿನ ಔದಾಸೀನ್ಯವೇ ಕಾರಣ ವೆಂದು ನಾವು ಮನಗಂಡಿದ್ದೇವೆ. ಈ ವಿರೋಧಾಭಾಸವು ಎಲ್ಲ ವಿಷಯಗಳಲ್ಲಿಯೂ ಸ್ತ್ರೀಯನ್ನು ಪುರುಷನಿಗೆ ಸಮಾನಗೊಳಿಸಬೇಕೆಂಬ ನಮ್ಮ ಪ್ರಾಮಾಣಿಕ ಮತ್ತು ರಾಜಕೀಯವಾಗಿ ಸಮರ್ಥಿಸಬಹುದಾದ ಬಯಕೆಯ ಪರಿಣಾಮವಾಗಿದೆ.

ಜರ್ಮನಿಯಲ್ಲಿ ಮಾದರಿ ಸಮಾಜವನ್ನು ನಿರ್ಮಿಸಬೇಕೆಂಬ ಧ್ಯೇಯದಿಂದ ಹಿಟ್ಲರನು ಅನೇಕ ಬಾಲವಾಡಿಗಳನ್ನು ಆರಂಭಿಸಿದನು. ವಿಶೇಷವಾಗಿ ಆಯ್ಕೆ ಮಾಡಿದ ಸುಂದರರನ್ನೂ ಸುಂದರಿಯರನ್ನೂ ಪರಸ್ಪರ ವಿವಾಹ ಮಾಡಿಸಿದನು. ಅವರಿಗೆ ಹುಟ್ಟಿದ ಮಕ್ಕಳನ್ನು ರಾಷ್ಟ್ರಕ್ಕೆ ಅರ್ಪಿಸಿದನು. ಆ ಬಳಿಕ ಆ ಮಕ್ಕಳು ತಂದೆ ತಾಯಿಯರನ್ನು ಒಮ್ಮೆಯೂ ನೋಡಲಿಲ್ಲ. 2ನೆಯ ಜಾಗತಿಕ ಯುದ್ಧದ ಬಳಿಕ ಅವರನ್ನು ಪರೀಕ್ಷಿಸುವ ಅವಕಾಶ ದೊರೆತ ಮ್ಯೂನಿಕ್ ವಾರ್ಸಿಟಿಯ ಪ್ರೊಫೆಸರ್ ಡಾ। ತಿಯೋಡರ್ ಹೆಲ್‌ಬರ್ಗ್ ಹೇಳುತ್ತಾರೆ, "ಆ ಮಕ್ಕಳು ಸುಂದರರಾಗಿದ್ದರೂ ಅವರು ಮೂಕರಾಗಿದ್ದರು. ಅಧಿಕೃತ ಅಂದಾಜಿನಂತೆ ಇಂಥ ಸಹಸ್ರಗಟ್ಟಲೆ ಮಕ್ಕಳು ಜರ್ಮನಿಯಲ್ಲಿದ್ದರು."

ಆರೋಗ್ಯದಾಯಕ ಸಮಾಜ ಸೃಷ್ಟಿಗೆ ಮೊಲೆಯುಣಿಸುವ ತಾಯಿ ಎಂಬ ಕುರ್‌ಆನೀ ಕಲ್ಪನೆಯನ್ನು ಕಾರ್ಯಗತಗೊಳಿಸಬೇಕಾದುದು ಅನಿವಾರ್ಯವೆಂದು ಇಂತಹ ಅಸಂಖ್ಯಾತ ಅನುಭವಗಳು ನಿಚ್ಚಳಪಡಿಸುತ್ತಿವೆ.

# ಉತ್ತಮ ತಾಯಿ

ಅಮೆರಿಕದ ಮನೋಶಾಸ್ತ್ರಜ್ಞ ತಿಯೋಡರ್ ರೈಕ್ 'ಸ್ತ್ರೀ ಪುರುಷರ ಮಧ್ಯೆ ಭಾವನಾತ್ಮಕ ವೈವಿಧ್ಯತೆಗಳು' ಎಂಬ ಗ್ರಂಥದಲ್ಲಿ ತಾಯ್ತನದಲ್ಲಿ ಅಭಿಮಾನಪಡುವ ಓರ್ವ ಸ್ತ್ರೀಯ ಮಾತನ್ನು ಉಲ್ಲೇಖಿಸಿದ್ದಾರೆ, "ಬೌದ್ಧಿಕ ಹಾಗೂ ಇತರ ರಂಗಗಳಲ್ಲಿರುವ ಪುರುಷನ ವೈಶಿಷ್ಟ್ಯವನ್ನು ನಿಸ್ಸಂಕೋಚವಾಗಿ ನಾವು ಅಂಗೀಕರಿಸುತ್ತೇವೆ. ಆದರೆ, ಸ್ತ್ರೀಯರಾದ ನಾವು ಅದಕ್ಕಿಂತ ವಿಶಿಷ್ಟವಾದ ಒಂದು ಅನುಗ್ರಹವನ್ನು ಪಡೆದಿದ್ದೇವೆ. ನಾವು ಇಲ್ಲದಿದ್ದರೆ ಮಾನವಕುಲವು ಅಳಿದು ಹೋಗುವುದು. ಮಕ್ಕಳಿಗೆ ನಾವೇ ಜನ್ಮ ನೀಡುತ್ತೇವೆ. ಆ ಮೂಲಕ ಮುಂದಿನ ಪೀಳಿಗೆಯ ಅಸ್ತಿತ್ವವನ್ನು ನಾವು ಖಾತ್ರಿ ಪಡಿಸುತ್ತೇವೆ."

ಪ್ರಿಯ ಸಹೋದರಿ, ತಾಯ್ತನದ ಕುರಿತು ನಿನಗೆ ಇಂಥ ಅಭಿಮಾನ ಪ್ರಜ್ಞೆಯಿದೆಯೇ? ಭವಿಷ್ಯದಲ್ಲಿ ಈ ಭೂಮಿಯಲ್ಲಿ ಯಾರು ಬದುಕಬೇಕೆಂದು ನಿರ್ಧರಿಸು ವವರು ನೀವೇ ಎಂಬ ವಾಸ್ತವಿಕತೆಯನ್ನು ಗಂಭೀರವಾಗಿ ಮನಗಂಡಿದ್ದೀರಾ? ದಾಂಪತ್ಯಕ್ಕೆ ಕಾಲಿರಿಸಿದಾಗ ಓರ್ವ ಆದರ್ಶ ತಾಯಿಯಾಗಬೇಕೆಂದು ಬಯಸಿದ್ದೀರಾ? ಗರ್ಭಿಣಿಯೆಂದು ತಿಳಿದಾಗ ಹುಟ್ಟಲಿರುವ ಮಗು ತನಗೂ ಕುಟುಂಬಕ್ಕೂ ಸಮಾಜಕ್ಕೂ ಧರ್ಮಕ್ಕೂ ಉಪಕಾರಿಯಾಗುವ ಸಂತಾನವಾಗಬೇಕೆಂದು ಪ್ರಪಂಚ ದೊಡೆಯನಲ್ಲಿ ಪ್ರಾರ್ಥಿಸಿದ್ದೀರಾ? ಹೆರಿಗೆಯ ಬಳಿಕ ಮಗುವನ್ನು ಪ್ರಥಮವಾಗಿ ಎತ್ತಿ ಕೊಂಡಾಗ ಮನಸ್ಸಿನ ಭಾವನೆ ಹೇಗಿತ್ತು? ಕೇವಲ ಸಂತೋಷ ಮತ್ತು ಸಂತೃಪ್ತಿಯಾಗಿತ್ತೇ? ಅಥವಾ ಮನಸ್ಸು ಮತ್ತು ತುಟಿಗಳು ಪ್ರಾರ್ಥನಾ ಭರಿತವಾಗಿತ್ತೇ? ನೆನಪಿರಲಿ, ಪ್ರಾರ್ಥನೆಯಿಲ್ಲದ ಜೀವನವು ಮರುಭೂಮಿಯಂತೆ ಬರಡಾಗಿದೆ.

ನಿಮ್ಮ ಜೋಗುಳದಲ್ಲಿ 'ಲಾ ಇಲಾಹ ಇಲ್ಲಲ್ಲಾಹ್' ಸೇರಿತ್ತೇ? ಅದನ್ನು ಹೇಳಿ ಮಗುವನ್ನು ಮಲಗಿಸುವಾಗ ಮನಸ್ಸಿನಲ್ಲಿ ಯಾವ ಚಿಂತೆಯಿತ್ತು? ಮಗು ಬೇಗನೆ ನಿದ್ರಿಸಲಿ, ತಂಟೆ ಮಾಡದಿರಲಿ ಎಂಬುದು ಮಾತ್ರವಾಗಿತ್ತೇ? ಆ ಪವಿತ್ರ ವಚನವು ಪ್ರತಿನಿಧಿಸುವ ಆದರ್ಶ ಮತ್ತು ಪರಿಶುದ್ಧ ಜೀವನವು ಮಗುವಿಗೆ ದೊರೆಯಬೇಕೆಂಬ ಆಗ್ರಹ ಮತ್ತು ಪ್ರಾರ್ಥನಾ ಭಾವದಿಂದ ಜೋಗುಳ ಹಾಡಿದ್ದೀರಾ? ತಿಳಿದಿರಲಿ, ಅಲ್ಲಾಹನು ಮನಸ್ಸನ್ನು ನೋಡುತ್ತಾನೆ. ಅದರ ಆಗ್ರಹಾಭಿಲಾಷೆಗಳನ್ನು ವಿಶ್ಲೇಷಿಸುತ್ತಾನೆ.

ನೀವು ಕೆಲಸದಲ್ಲಿರುವಾಗ ಮಗು ಅತ್ತರೆ ಏನು ಮಾಡುತ್ತೀರಿ? ಕೋಪ ಬರುತ್ತದೆಯೇ? ನೀವು ಬಳಲಿದಾಗ ಅಥವಾ ಅಸೌಖ್ಯದಲ್ಲಿದ್ದಾಗ ಮಗು ಹಠ ಹಿಡಿದರೆ ಸಿಟ್ಟು ಬರುತ್ತದೆಯೇ?

ಆ ಕೋಪವನ್ನು ಮಗುವಿನ ಮೇಲೆ ತೋರಿಸುತ್ತೀರಾ? ಮಧ್ಯ ರಾತ್ರಿಯಲ್ಲಿ ಮಗು ಎಚ್ಚೆತ್ತು ರಚ್ಚೆ ಹಿಡಿದು ಅಳಲಾರಂಭಿಸಿದರೆ ನಿಮಗೆ ಏನನಿಸುತ್ತದೆ? ನೀವು ಎಂದಾದರೂ ನಿಮ್ಮ ಮಗುವಿಗೆ ಶಾಪ ಹಾಕಿದ್ದೀರಾ? ಮಕ್ಕಳನ್ನು ಶಪಿಸುವುದು ಮಹಾ ಪಾಪವಾಗಿದೆ. ಜಾನುವಾರುಗಳನ್ನೂ ಶಪಿಸಬಾರದೆಂದು ಪ್ರವಾದಿಯವರು(ಸ) ಕಲಿಸಿದ್ದಾರೆ.

ಮಕ್ಕಳಿಗೆ ಕೇಳಿಸುವಂತೆ ನೀವು ಎಂದಾದರೂ ಬಯ್ಗುಳ ಮತ್ತು ಕೆಟ್ಟ ಪದಗಳನ್ನು ಬಳಸಿದ್ದೀರಾ? ಸುಳ್ಳು ಹೇಳುತ್ತೀರಾ? ಮಕ್ಕಳಿಂದ ಸುಳ್ಳು ಹೇಳಿಸಿದ್ದೀರಾ? ಮನೆಯಲ್ಲಿ ಹಣವಿರುವಾಗ 'ಇಲ್ಲಿ ಏನೂ ಇಲ್ಲ'ವೆಂದು ಭಿಕ್ಷುಕನಿಗೆ ಹೇಳುವಂತೆ ಕಲಿಸಿದ್ದೀರಾ? ಮಕ್ಕಳ ಮನಸ್ಸು ಬಿಳಿ ಹಾಳೆಯಂತೆ ಎಂಬುದನ್ನು ಮರೆಯಬಾರದು. ಕಂಡದ್ದು ಕೇಳಿದ್ದೆಲ್ಲವೂ ಅದರಲ್ಲಿ ಕ್ಷಿಪ್ರವಾಗಿ ಮೂಡುತ್ತದೆ. ತಾಯಿಯೆಂಬ ಪ್ರಥಮ ಶಾಲೆಯಿಂದಲೇ ಸುಳ್ಳು ಮತ್ತು ಬಯ್ಗುಳವನ್ನು ಆಲಿಸುವ ಅವಕಾಶ ದೊರೆಯದಿರಲಿ, ಮಕ್ಕಳಲ್ಲಿ ದುರ್ಗುಣ ಬೆಳೆಯುವುದಕ್ಕಿಂತ ದೊಡ್ಡ ದೌರ್ಭಾಗ್ಯ ಬೇರೇನಿದೆ?

ಪತಿ ಅಥವಾ ಇತರರ ಮೇಲಿನ ಕೋಪವು ಮಕ್ಕಳೊಂದಿಗಿನ ನಿಮ್ಮ ವರ್ತನೆಯಲ್ಲಿ ಕಾಣಿಸುತ್ತಿದೆಯೇ? ಅದರಿಂದಾಗಿ ಅವರನ್ನು ಅನಗತ್ಯವಾಗಿ ದಂಡಿಸುತ್ತೀರಾ? ಪತಿಯನ್ನು ಮಕ್ಕಳ ಮುಂದೆ ದೂರುತ್ತೀರಾ? ಹಾಗಿದ್ದರೆ ನಿಮ್ಮ ಮಕ್ಕಳು ಕೆಡಲು ಬೇರೇನೂ ಬೇಕಾಗಿಲ್ಲ. ಇದರಿಂದ ಅವರಿಗೆ ತಂದೆಯೊಡನೆ ಪ್ರೀತ್ಯಾದರ ಕಡಿಮೆಯಾಗುತ್ತದೆ. ತನ್ನಿಮಿತ್ತ ತಂದೆಯನ್ನು ಅನುಸರಿಸಿದಂತಾಗುತ್ತದೆ. ಕ್ಷಿಪ್ರವಾಗಿ ಅದು ನಿಮಗೂ ಪ್ರತಿಕೂಲವಾಗುತ್ತದೆ.

ನೀವು ಮಕ್ಕಳಲ್ಲಿ ಒಬ್ಬರನ್ನು ದೂರಿ ಇನ್ನೊಬ್ಬರನ್ನು ಹೊಗಳಿ ಮಾತಾಡುತ್ತೀರಾ? ವಸ್ತುತಃ ಆ ಬಗ್ಗೆ ನಿಮಗೆ ನ್ಯಾಯೋಚಿತ ಕಾರಣಗಳಿದ್ದರೂ ಅದು ದೂರವ್ಯಾಪಿ ಪರಿಣಾಮ ಬೀರುತ್ತದೆ. ಒಂದೇ ತಂದೆ ತಾಯಿಯ ಎಲ್ಲ ಮಕ್ಕಳು ಒಂದೇ ಸ್ವಭಾವ ಮತ್ತು ಯೋಗ್ಯತೆ ಯವರಾಗಿರುವುದಿಲ್ಲ. ಸ್ವಭಾವ ಮತ್ತು ಗುಣನಡವಳಿಕೆಗಳಲ್ಲಿ ವ್ಯತ್ಯಾಸವಿರುವುದು ಸರ್ವ ಸಾಮಾನ್ಯವಾಗಿದೆ. ಈ ವಿಷಯವನ್ನು ಗಮನಿಸದೆ ನೀವು ಅವರೊಡನೆ ವರ್ತಿಸುತ್ತೀರಾ?

ಮಕ್ಕಳನ್ನು ನೀವು ಇತರರ ಮುಂದೆ ದೂರುತ್ತೀರಾ? ಅದರಿಂದಾಗಿ ಅವರ ಮನೋಬಲ ಕುಸಿದು ಅವರು ಅಸಮರ್ಥರಾಗಬಹುದೆಂಬ ವಾಸ್ತವಿಕತೆಯನ್ನು ಮರೆಯ ಬಾರದು. ಅದರೊಂದಿಗೆ ಅವರಿಗೆ ನಿಮ್ಮ ಮೇಲಿನ ಪ್ರೀತಿ ಮಮತೆ ಕಡಿಮೆಯಾಗಿ ಕೋಪ ಮತ್ತು ವಿರಸ ಹೆಚ್ಚಬಹುದು. ವಸ್ತುತಃ ಮಕ್ಕಳ ಸಾಮರ್ಥ್ಯ ಮತ್ತು ಅಸಾಮರ್ಥ್ಯಕ್ಕೆ ಅವರು ಕಾರಣರಲ್ಲ. ಎಲ್ಲವೂ ದೇವ ನಿಶ್ಚಿತವಾಗಿದೆ ಅಥವಾ ಅದರಲ್ಲಿ ಏನಾದರೂ ಪಾತ್ರವಿದ್ದರೂ ಅದು ನೀವು ಮತ್ತು ನಿಮ್ಮ ಪತಿಯದ್ದಾಗಿದೆ.

ನೀವು ಮಕ್ಕಳಿಗೆ ಅಲ್ಲಾಹನ ಕುರಿತು ಹೇಳಿಕೊಟ್ಟಿದ್ದೀರಾ? ಪರಿಸರದ ಸೋಜಿಗ ಗಳತ್ತ ಗಮನ ಸೆಳೆದು ಆತನ ಸೃಷ್ಟಿ ಮಹಾತ್ಮೆಯ ಕುರಿತು ವಿವರಿಸುತ್ತೀರಾ? ಪ್ರವಾದಿಗಳು ಮತ್ತು ಮಹಾಪುರುಷರ ಕುರಿತು ತಿಳಿಸಿದ್ದೀರಾ? ಪ್ರೀತಿ, ಕರುಣೆ, ವಾತ್ಸಲ್ಯ, ದಯೆ, ವಿನಯ, ಸೌಜನ್ಯ, ಔದಾರ್ಯ, ಸತ್ಯನಿಷ್ಠೆ, ಪ್ರಾಮಾಣಿಕತೆ, ನ್ಯಾಯ ಪ್ರಜ್ಞೆ ಇತ್ಯಾದಿ

ಸದ್ಗುಣಗಳನ್ನು ಬೆಳೆಸಲು ಪ್ರೇರಕವಾಗುವ ಕಥೆ ಮತ್ತು ಐತಿಹಾಸಿಕ ಘಟನೆಗಳನ್ನು ಹೇಳಿಕೊಟ್ಟಿದ್ದೀರಾ? ಕಥೆಗಳು ಮಕ್ಕಳ ಮೇಲೆ ಕ್ಷಿಪ್ರ ಪರಿಣಾಮ ಬೀರುತ್ತದೆ. ಅದು ಅವರ ಮನದಲ್ಲಿ ಸದಾ ಉಳಿಯುತ್ತದೆ.

ನಿಮ್ಮ ಮಕ್ಕಳ ಅಳು ನಿಲ್ಲಿಸಲಿಕ್ಕಾಗಿ ಟಿ.ವಿ. ತೋರಿಸುತ್ತೀರಾ? ಅವರ ಮಧ್ಯೆ ಅದನ್ನು ನೋಡುತ್ತೀರಾ? ವಾರ್ತೆಗಳನ್ನು ಆಲಿಸುವುದಿದ್ದರೂ ಮಧ್ಯಂತರ ಜಾಹೀರಾತುಗಳ ಅಶ್ಲೀಲತೆಯನ್ನು ಮಕ್ಕಳ ಜತೆಯಲ್ಲಿ ನೋಡುತ್ತೀರಾ? ಅದು ಅವರ ಕಣ್ಣು ಮತ್ತು ಮಿದುಳನ್ನು ಪೀಡಿಸುವುದರೊಂದಿಗೆ ಮನಸ್ಸು ಮತ್ತು ಆತ್ಮವನ್ನೂ ಕೆಡಿಸುವುದೆಂಬ ವಿಷಯವನ್ನು ಮರೆಯಬಾರದು.

ನಿಮಗೆ ನಿಮ್ಮ ಮಕ್ಕಳ ಬಗ್ಗೆ ಏನಾದರೂ ಕನಸು ಅಥವಾ ಕಲ್ಪನೆಗಳಿವೆಯೇ? ಅವರು ದೊಡ್ಡ ಶ್ರೀಮಂತರು ಮತ್ತು ಗಣ್ಯರಾಗಬೇಕೆಂದು ನಿಮ್ಮ ಬಯಕೆಯೇ ಅಥವಾ ಉತ್ತಮ ಮಾನವರಾಗಬೇಕೆಂಬುದೇ? ನಿಮ್ಮ ಉತ್ತಮ ಕನಸು, ಆಶೆ-ಆಕಾಂಕ್ಷೆಗಳು ನಿಮ್ಮ ಪ್ರಾರ್ಥನೆಗಳಲ್ಲಿ ಪ್ರತಿಫಲಿಸುವುದಿಲ್ಲವೇ? ಮಕ್ಕಳಿಗಾಗಿ ತಂದೆ ತಾಯಂದಿರು ಮಾಡುವ ಪ್ರಾರ್ಥನೆಗೆ ವಿಶೇಷ ಮಹತ್ವವಿದೆಯೆಂದು ಪ್ರವಾದಿಯವರು(ಸ) ಕಲಿಸಿದ್ದಾರೆ.

ನೀವು ನಮಾಝ್ ಮಾಡುವಾಗ ಮಕ್ಕಳನ್ನು ಚಿಕ್ಕಂದಿನಲ್ಲಿಯೇ ಜತೆ ಸೇರಿಸುತ್ತೀರಾ? ಅವರಿಗೆ ನಮಾಝ್ ಮತ್ತು ಪ್ರಾರ್ಥನೆಯ ಅಭ್ಯಾಸ ಮಾಡಿಸುತ್ತೀರಾ? ತಂದೆ ತಾಯಿಯರು ಮತ್ತು ಹಿರಿಯರನ್ನು ಗೌರವಿಸಿ ಅನುಸರಿಸುವುದನ್ನು ಅವರಿಗೆ ಕಲಿಸುತ್ತೀರಾ? ಅದಕ್ಕಿಂತ ಮಿಗಿಲಾಗಿ, ನೀವು ನಿಮ್ಮ ತಂದೆ ತಾಯಿಯರನ್ನು ಪ್ರೀತಿಸಿ ಗೌರವಿಸಿ ಸೇವೆ ಮಾಡುವುದನ್ನು ಕೇಳಿ, ನೋಡಿ ತಿಳಿದುಕೊಂಡರೆ ಅದು ಅವರ ಮೇಲೆ ಹೆಚ್ಚಿನ ಪ್ರಭಾವ ಬೀರುತ್ತದೆ.

ಮಕ್ಕಳಿಗೆ ಆಟಿಕೆ, ಬಟ್ಟೆಬರೆ, ಚಪ್ಪಲಿ, ಶೂ ಖರೀದಿಸಿ ಕೊಡುವಾಗ ಮಿತತನ ಪಾಲಿಸುತ್ತೀರಾ? ಸರಳತೆಯ ಪ್ರಾಮುಖ್ಯತೆಯನ್ನು ಹೇಳಿಕೊಟ್ಟಿದ್ದೀರಾ? ನಿಮ್ಮ ಜೀವನ ರೀತಿ, ಶೈಲಿ ಮತ್ತು ಧೋರಣೆಗಳು ಮಕ್ಕಳಲ್ಲಿ ದುಂದು, ಅನಾವ್ಯಯ ಮತ್ತು ಆಡಂಬರಕ್ಕೆ ಕಾರಣವಾಗಬಾರದು. ಹಾಗೆಯೇ ಜಿಪುಣತೆಯೂ ಒಳ್ಳೆಯದಲ್ಲ.

ಹತ್ತಿರದ ಸಂಬಂಧಿಕರನ್ನು, ನೆರೆಕರೆಯವರನ್ನು ಮತ್ತು ಊರಿನವರನ್ನು ಮಕ್ಕಳಿಗೆ ಪರಿಚಯಪಡಿಸುತ್ತೀರಾ? ಇದರಿಂದಾಗಿ ಕುಟುಂಬ ಸಂಬಂಧ ಸುದೃಢವಾಗುತ್ತದೆ. ಸಾಮಾಜಿಕ ಪ್ರಜ್ಞೆ ಬೆಳೆಯುತ್ತದೆ. ಮಕ್ಕಳು ಅವರ ಸಂಗಡಿಗರೊಡನೆ ಆಟವಾಡಿ ಗೆಳೆತನ ಬೆಳೆಸಲು ನೀವು ಪ್ರೋತ್ಸಾಹಿಸುತ್ತೀರಾ ಅಥವಾ ನಿರುತ್ತೇಜಿಸುತ್ತೀರಾ? ಗರಿಷ್ಠ ಪ್ರೋತ್ಸಾಹಿಸಬೇಕು. ಆದರೆ ಕೆಟ್ಟ ಮಕ್ಕಳೊಂದಿಗೆ ಸೇರಲು ಬಿಡಬಾರದು. ಯುಕ್ತಿಯಿಂದ ಅವರಿಂದ ಬೇರ್ಪಡಿಸಿ ಉತ್ತಮ ಗೆಳೆಯರೊಡನೆ ಸೇರಿಸಬೇಕು.

ನೀವು ಮಕ್ಕಳನ್ನು ಬೆದರಿಸಿ ದಂಡಿಸುತ್ತೀರಾ? ಅದಕ್ಕಿಂತ ಮುಂಚೆ ತಪ್ಪನ್ನು ಅವರಿಗೆ ಮನಗಾಣಿಸಿದ್ದೀರಾ? ಮಕ್ಕಳಿಗೆ ಅವರ ತಪ್ಪನ್ನು ಮನವರಿಕೆ ಮಾಡಿಸದೆ ಗದರಿಸಿ

ದಂಡಿಸಬಾರದು. ತಾಯಿಯೇ ಸ್ವತಃ ಆರೋಪಿಸಿ ವಿನಾಕಾರಣ ಹೊಡೆದರೆಂಬ ಭಾವನೆ ಅವರಲ್ಲಿ ಮೂಡುವಂತಾಗಬಾರದು. ಅದೇ ವೇಳೆ, ಮಕ್ಕಳೊಂದಿಗೆ ಮುಕ್ತವಾಗಿ ಬೆರೆತು ಅವರಿಗೆ ಏನು ಬೇಕಾದರೂ ಹೇಳುವ ಮತ್ತು ಕೇಳುವಂಥ ವಾತಾವರಣವನ್ನು ನಿರ್ಮಿಸಬೇಕು. ಮಕ್ಕಳಿಗೆ ಸಂಬಂಧಿಸಿದ ಪ್ರಮುಖ ವಿಷಯಗಳನ್ನು ನಿರ್ಧರಿಸುವಾಗ ಅವರೊಂದಿಗೆ ಸಮಾಲೋಚಿಸಿ ನೀವು ತೀರ್ಮಾನಿಸಿದರೂ ಅದರ ನ್ಯಾಯ ಮತ್ತು ಒಳಿತನ್ನು ಅವರಿಗೆ ತಿಳಿಸಬೇಕು. ಇದರಿಂದಾಗಿ ತೀರ್ಮಾನಗಳ ಬಗ್ಗೆ ಸಂತೃಪ್ತರಾಗಿ ಅವರ ಪ್ರತಿಭೆ ಬೆಳೆಯಲು ಸಹಾಯಕವಾಗುತ್ತದೆ.

ಜೀವನದಲ್ಲಿ ಕೇವಲ ಸುಖಾನುಕೂಲತೆ ಮಾತ್ರವಲ್ಲ, ದುಃಖ ದುಮ್ಮಾನವೂ ಇದೆಯೆಂಬ ಸತ್ಯವನ್ನು ನೀವು ಮಕ್ಕಳಿಗೆ ಪದೇಪದೇ ಮನವರಿಕೆ ಮಾಡಿಸುತ್ತೀರಾ? ನಿಮಗಿಂತ ಸಂಕಷ್ಟದಲ್ಲಿರುವವರನ್ನು ತೋರಿಸಿ, ಅಲ್ಲಾಹನು ನೀಡಿರುವ ಅನುಗ್ರಹದ ಬಗ್ಗೆ ಅವರ ಗಮನ ಸೆಳೆಯುತ್ತೀರಾ? ಬಡವರ ಅವಸ್ಥೆಯನ್ನು ತಿಳಿಸಿ ಅವರ ಬಗ್ಗೆ ಕನಿಕರ, ಅನುಕಂಪ ಮೂಡಿಸಿ ಅವರಿಗೆ ನೆರವಾಗುವ ಭಾವನೆಯನ್ನು ಬೆಳೆಸುತ್ತೀರಾ? ಮಕ್ಕಳ ಕೈಯಲ್ಲಿ ದಾನ ಮಾಡಿಸಿದರೆ, ಇತರರಿಗೆ ನೆರವು ತಲುಪಿಸಿದರೆ ಅವರಲ್ಲಿ ಔದಾರ್ಯ ಮನೋಭಾವ ಬೆಳೆಯುತ್ತದೆ.

ನೀವು ರೋಗಿಗಳ ಸಂದರ್ಶನಕ್ಕೆ ಹೋಗುವಾಗ ಮಕ್ಕಳನ್ನು ಜತೆಯಲ್ಲಿ ಸೇರಿಸುತ್ತೀರಾ? ಆಗ ರೋಗ ಮತ್ತು ಆರೋಗ್ಯ ಹಾಗೂ ಅದರ ಬೆಲೆಯ ಕುರಿತು ಹೇಳುತ್ತೀರಾ? ರೋಗವು ಅಲ್ಲಾಹನ ಪರೀಕ್ಷೆಯಾಗಿದೆ, ಸಹನೆ ವಹಿಸಿದರೆ ಅಪಾರ ಪ್ರತಿಫಲವಿದೆಯೆಂಬ ಕುರ್‌ಆನ್ ವಚನವನ್ನು ತಿಳಿಸಿದ್ದೀರಾ? ರೋಗ ಶಮನ ಮತ್ತು ರೋಗಿಯ ಸಾಂತ್ವನಕ್ಕಾಗಿ ಪ್ರಾರ್ಥಿಸುವಾಗ ಮಕ್ಕಳನ್ನು ಜತೆಯಲ್ಲಿ ನಿಲ್ಲಿಸಿ ಅದರಲ್ಲಿ ಸೇರಿಸುತ್ತೀರಾ? ಮರಣ ಸಂಭವಿಸಿರುವ ಮನೆಗಳಿಗೆ ಹೋಗುವಾಗಲೂ ಮಕ್ಕಳನ್ನು ಜತೆಯಲ್ಲಿ ಕರೆದೊಯ್ಯುತ್ತೀರಾ? ಆಗ ಮರಣ ಮತ್ತು ಪರಲೋಕದ ಬಗ್ಗೆ ನೀವು ಹೇಳುವ ಮಾತುಗಳು ಅವರ ಮನದಲ್ಲಿ ನೆಲೆಸಬಹುದು.

ಶಾಲೆಗೆ ಹೋಗುವ ಮಕ್ಕಳಿಗೆ ನೀವು ಕಲಿಯಲು ನೆರವಾಗುತ್ತೀರಾ? ಕಲಿಕೆಯಲ್ಲಿ ಹಿಂದುಳಿದಿರುವುದಕ್ಕಾಗಿ ದೂಷಿಸುತ್ತೀರಾ ಅಥವಾ ಪ್ರೀತಿಯಿಂದ ವಿಷಯಗಳನ್ನು ಹೇಳಿ ಕೊಡುತ್ತೀರಾ? ನೀವು ಕಲಿಯುವಿಕೆಯಲ್ಲಿ ನೆರವಾಗುವುದು ಮಕ್ಕಳಿಗೆ ಇಷ್ಟವೋ, ಸಂತೋಷವೋ ಅಥವಾ ಹೆದರಿಕೆಯೋ? ನಿಮ್ಮ ಉಪಸ್ಥಿತಿ ಮತ್ತು ನೆರವನ್ನು ಮೆಚ್ಚಿ ಬಯಸುವ ರೀತಿಯಲ್ಲಿ ನೀವು ವ್ಯವಹರಿಸಬೇಕು.

ಮಕ್ಕಳನ್ನು ಒಳ್ಳೆಯ ಕೆಲಸ ಮಾಡಿದಾಗ ಪ್ರೋತ್ಸಾಹಿಸಿ ಪ್ರಶಂಸಿಸುತ್ತೀರಾ? ಗೆದ್ದಾಗ ಬಹುಮಾನಗಳನ್ನು ನೀಡುತ್ತೀರಾ? ಸಾಮಾನ್ಯ ಪ್ರಶಂಸೆ, ಉಡುಗೊರೆ, ಮುಗುಳ್ನಗು ಮತ್ತು ಆಲಿಂಗನ ಇತ್ಯಾದಿಗಳಿಂದ ಮಕ್ಕಳ ಸದ್ವರ್ತನೆಗಳನ್ನು ಪ್ರೋತ್ಸಾಹಿಸಬೇಕು. ಆದರೆ ಅದು ಮಿತಿಮೀರದಂತೆ ಎಚ್ಚರವಹಿಸಬೇಕು.

ಅತಿಥಿ ಸತ್ಕಾರದ ವೇಳೆಯಲ್ಲಿ ನೀವು ಮಕ್ಕಳನ್ನು ಭಾಗಿಗೊಳಿಸುತ್ತೀರಾ? ಸಂಬಂಧಿಕರ ಮನೆಗೆ ಹೋಗುವಾಗ ಅವರನ್ನು ಕರೆದುಕೊಂಡು ಹೋಗುತ್ತೀರಾ? ಅವೆರಡೂ ಬಹಳಷ್ಟು ಉಪಯುಕ್ತವಾಗಿದೆ.

ನೀವು ಮಕ್ಕಳ ಮಧ್ಯೆ ಪಕ್ಷಪಾತ ತೋರಿಸುತ್ತೀರಾ? ಗಂಡು ಮಕ್ಕಳಿಗೆ ಹೆಣ್ಣು ಮಕ್ಕಳಿಗಿಂತ ಪ್ರಾಮುಖ್ಯ ನೀಡುತ್ತೀರಾ? ಮಕ್ಕಳೊಂದಿಗಿನ ಯಾವುದೇ ರೀತಿಯ ತಾರತಮ್ಯವು ಈ ಲೋಕದಲ್ಲಿ ಮಾತ್ರವಲ್ಲ, ಪರಲೋಕದಲ್ಲಿಯೂ ಮಹಾ ಗಂಡಾಂತರ ಕಾರಿಯಾಗಿರುವುದೆಂಬುದನ್ನು ಮರೆಯಬಾರದು.

ಮೇಲಿನ ಪ್ರಶ್ನೆಗಳಿಗೆ ನಿಮ್ಮ ಉತ್ತರವು ತೃಪ್ತಿಕರವಾಗಿದ್ದರೆ ನೀವೋರ್ವ ಆದರ್ಶ ತಾಯಿಯೆಂದು ಹೆಮ್ಮೆಪಡಬಹುದು. ಅದರ ಸತ್ಫಲವನ್ನು ಉಭಯ ಲೋಕಗಳಲ್ಲಿಯೂ ನಿರೀಕ್ಷಿಸಬಹುದು.

ಞಞ

# ಸಂಬಂಧಿಕರಿಂದ ದೇವ ಸಾಮಿಪ್ಯ

ಆಪ್ತ ಸಂಬಂಧಿಕರ ಉಪಸ್ಥಿತಿಯಿಂದ ನಿಮಗೆ ಸಂತೋಷವಾಗುವುದೇ? ಸಂಬಂಧಗಳು ಎಂದಾದರೂ ನಿಮಗೆ ಬಂಧನವೆನಿಸಿದೆಯೇ? ನಾದಿನಿಯನ್ನು ನೀವು ಮನಃಪೂರ್ವಕ ಪ್ರೀತಿಸುತ್ತೀರಾ? ಅವರನ್ನು ಶಾಪ ಮತ್ತು ಪೀಡೆಯೆಂದು ಭಾವಿಸುತ್ತೀರಾ? ನಿಮ್ಮ ಪತಿಯು ಆತನ ಕುಟುಂಬದವರನ್ನು ಪ್ರೀತಿಸಿ ನೆರವು ನೀಡುವುದು ನಿಮಗೆ ಪ್ರಿಯವಾಗಿದೆಯೇ? ನೀವು ಅದನ್ನು ಪ್ರೋತ್ಸಾಹಿಸುತ್ತೀರಾ ಅಥವಾ ನಿರುತ್ತೇಜಿಸುತ್ತೀರಾ? ಸಹೋದರ ಮತ್ತು ಸಹೋದರನ ಪತ್ನಿಯಿಂದ ನೀವು ಬಯಸುವ ಅಥವಾ ನಿರೀಕ್ಷಿಸುವುದೆಲ್ಲವೂ ನಿಮ್ಮ ನಾದಿನಿಗೆ ನೀಡಲು ನೀವು ಸಿದ್ಧರಿರುವಿರಾ? ಪತಿಯು ನಿಮ್ಮ ಆಪ್ತ ಸಂಬಂಧಿಕರಿಗೆ ವಿಶೇಷ ಗಮನ ನೀಡಬೇಕೆಂದು ನೀವು ಬಯಸುವುದಿಲ್ಲವೇ? ಹಾಗೆಯೇ ಅವರ ಸಂಬಂಧಿಕರನ್ನು ಉಪಚರಿಸಲು ನಿಮಗೂ ಸಾಧ್ಯವಾಗುತ್ತಿದೆಯೇ?

ಕುಟುಂಬ ಸಂಬಂಧಕ್ಕೆ ಇಸ್ಲಾಮ್ ನೀಡುವ ಮಹತ್ವವನ್ನು ನೀವು ಅರಿತಿದ್ದೀರಾ? ತನ್ನ ಕುಟುಂಬ ಮತ್ತು ಪತಿಯ ಸಂಬಂಧಿಕರೊಡನೆ ವ್ಯವಹರಿಸುವಾಗ ಆ ಕುರಿತು ಜ್ಞಾಪಿಸುತ್ತೀರಾ? 'ನಾನು, ನನ್ನ ಪತಿ ಮತ್ತು ನನ್ನ ಮಗು' ಎಂಬ ಕುಟಿಲ, ಸಂಕುಚಿತ ಮನಸ್ಸು ಹೊಂದಿದ್ದೀರಾ? ಹತ್ತಿರದ ಸಂಬಂಧಿಕರನ್ನು ಗೌರವಿಸಿ, ಸಹಾಯ ಸಹಕಾರ ನೀಡಲು 'ಅಹಂ' ನಿಮಗೆ ಅಡ್ಡಿಯಾಗುತ್ತಿದೆಯೇ?

ಇಂಥ ಪ್ರಶ್ನೆಗಳನ್ನು ಸ್ವತಃ ಕೇಳಿ ಅವುಗಳಿಗೆ ದೊರೆಯುವ ಉತ್ತರಗಳನ್ನು ಇಸ್ಲಾಮಿ ಬೋಧನೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿರಿ. ಅದು ನಿಮ್ಮ ಜೀವನಕ್ಕೆ ಹೊಸ ಬೆಳಕು ಚೆಲ್ಲುವುದೆಂದು ನಿರೀಕ್ಷಿಸಬಹುದು.

ಗರ್ಭಕೋಶಕ್ಕೂ ಕುಟುಂಬ ಸಂಬಂಧಕ್ಕೂ ಒಂದೇ ಪದವನ್ನು ಕುರ್‌ಆನ್ ಬಳಸಿದೆ. ಅದರೊಂದಿಗೆ ಕುರ್‌ಆನ್ ಅತ್ಯಧಿಕ ಬಳಸುವ ಅಲ್ಲಾಹನ ಅತಿಶ್ರೇಷ್ಠವಾದ ಗುಣ ವಿಶೇಷಣದೊಂದಿಗೂ ಸಂಬಂಧ ಹೊಂದಿದೆ. ಕುರ್‌ಆನ್ ಗರ್ಭಕೋಶಗಳಿಗೆ 'ಅರ್ಹಾಮ್' ಎಂಬ ಪದ ಬಳಸಿದೆ. ಕುಟುಂಬ ಸಂಬಂಧಗಳಿಗೆ 'ಗರ್ಭ ಪಾತ್ರೆಯ ಜನರು' ಎಂಬ ಅರ್ಥವಿರುವ 'ದವುಲ್ ಅರ್ಹಾಮ್' ಎಂಬ ಪದ ಪ್ರಯೋಗಿಸಿದೆ. ಅದಕ್ಕೆ ದೇವನಾಮವಾಗಿರುವ ರಹೀಮ್‌ನೊಂದಿಗೆ ಸಂಬಂಧವಿದೆ. ಈ ಮೂರರ ಹೊಂದಾಣಿಕೆಯು ಆಕಸ್ಮಿಕವಲ್ಲ. ಅಲ್ಲಾಹನು ಅವುಗಳನ್ನು ಪರಸ್ಪರ ಜೋಡಿಸಿರು

ವುದರಿಂದ ಅದು ಸಂಭವಿಸಿದೆ. ಅಲ್ಲಾಹನು ಕುಟುಂಬ ಸಂಬಂಧಕ್ಕೆ ತನ್ನ ಹತ್ತಿರದ ಸ್ಥಾನವನ್ನು ನೀಡಿದ್ದಾನೆ. ಆತನು ಆಜ್ಞಾಪಿಸುತ್ತಾನೆ,

ನೀವು ಯಾರ ಹೆಸರನ್ನೆತ್ತಿ ಪರಸ್ಪರ ಹಕ್ಕು ಬಾಧ್ಯತೆಗಳನ್ನು ಕೇಳುತ್ತೀರೋ ಆ ಅಲ್ಲಾಹನನ್ನು ಭಯಪಡಿರಿ. ಕುಟುಂಬ ಸಂಬಂಧಗಳನ್ನು ಕೆಡಿಸಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಮೇಲ್ನೋಟವನ್ನಿರಿಸಿಕೊಂಡಿರುವನೆಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ."

(ಪವಿತ್ರ ಕುರ್‌ಆನ್, 4:1)

"ಅನಂತರ ವಿಶ್ವಾಸವಿಟ್ಟವರು, 'ವಲಸೆ' ಮಾಡಿ ಬಂದವರು ಮತ್ತು ನಿಮ್ಮೊಟ್ಟಿಗೆ ಕೂಡಿಕೊಂಡು ಹೋರಾಡಿದವರು ಸಹ ನಿಮ್ಮೊಂದಿಗೆ ಸೇರಿದ್ದಾರೆ. ಆದರೆ ಅಲ್ಲಾಹನ ಗ್ರಂಥದಲ್ಲಿ ರಕ್ತ ಸಂಬಂಧಿಕರು ಪರಸ್ಪರ ಹೆಚ್ಚು ಹಕ್ಕುದಾರರು. ನಿಶ್ಚಯವಾಗಿಯೂ ಅಲ್ಲಾಹನು ಸಕಲ ವಸ್ತುಗಳ ಜ್ಞಾನಿಯಾಗಿರುತ್ತಾನೆ." (ಪವಿತ್ರ ಕುರ್‌ಆನ್, 8:75)

"ಅಲ್ಲಾಹ್ ನ್ಯಾಯ, ಪರೋಪಕಾರ ಹಾಗೂ ಆಪ್ತೇಷ್ಟರ ಬಗ್ಗೆ ಸೌಜನ್ಯದ ಆಜ್ಞೆ ನೀಡುತ್ತಾನೆ ಮತ್ತು ಅಶ್ಲೀಲ ಕಾರ್ಯ, ದುಷ್ಕೃತ್ಯ, ಅಕ್ರಮ, ಅತ್ಯಾಚಾರಗಳನ್ನು ನಿಷೇಧಿಸುತ್ತಾನೆ. ನೀವು ಜಾಗೃತರಾಗಲಿಕ್ಕಾಗಿ ಅವನು ನಿಮಗೆ ಉಪದೇಶ ನೀಡುತ್ತಾನೆ."

(ಪವಿತ್ರ ಕುರ್‌ಆನ್, 16:90)

"ಅಲ್ಲಾಹನು ಯಾವಯಾವ ಸಂಬಂಧಗಳನ್ನು ಕಾಪಾಡಲು ಆಜ್ಞೆ ಕೊಟ್ಟಿರುವನೋ ಅವುಗಳನ್ನು ಕಾಪಾಡಿಕೊಳ್ಳುತ್ತಾರೆ. ತಮ್ಮ ಪ್ರಭುವನ್ನು ಭಯಪಡುತ್ತಾರೆ. ಎಲ್ಲಾದರೂ ತಮ್ಮೊಡನೆ ಕೆಟ್ಟ ರೀತಿಯ ವಿಚಾರಣೆ ನಡೆದುಬಿಟ್ಟೀತೋ ಎಂದು ಹೆದರುತ್ತಾರೆ."

(ಪವಿತ್ರ ಕುರ್‌ಆನ್, 13:21)

"ಸಂಬಂಧಿಕನಿಗೆ ಅವನ ಹಕ್ಕನ್ನೂ, ದರಿದ್ರನಿಗೂ, ಪ್ರಯಾಣಿಕನಿಗೂ ಅವನವನ ಹಕ್ಕನ್ನೂ ಕೊಡಿರಿ. ದುಂದುವೆಚ್ಚ ಮಾಡಬೇಡಿರಿ." (ಪವಿತ್ರ ಕುರ್‌ಆನ್, 17:26)

"ಪಾಲಾಗುವ ಸಂದರ್ಭದಲ್ಲಿ (ಹಕ್ಕುದಾರರಲ್ಲದ) ಸಂಬಂಧಿಕರು, ಅನಾಥರು ಮತ್ತು ನಿರ್ಗತಿಕರು ಬಂದರೆ ಅವರಿಗೂ ಏನಾದರೂ ಕೊಡಿರಿ. ಅವರೊಡನೆ ಸೌಜನ್ಯದ ಮಾತುಗಳನ್ನಾಡಿರಿ." (ಪವಿತ್ರ ಕುರ್‌ಆನ್, 4:8)

ಅಲ್ಲಾಹನು ಹೀಗೆ ಹೇಳಿರುವುದಾಗಿ ಪ್ರವಾದಿ(ಸ) ತಿಳಿಸಿದ್ದಾರೆ: "ನಾನು ಪರಮ ಕರುಣಾಳುವಾಗಿದ್ದೇನೆ. ನಾನು ಗರ್ಭ ಪಾತ್ರೆಯನ್ನು ಸೃಷ್ಟಿಸಿದೆ. ತರುವಾಯ ನಾನು ಅದಕ್ಕೆ ನನ್ನ ಒಂದು ಹೆಸರನ್ನು (ಅರ್ಹಾಮ್) ನೀಡಿದೆ. ಆದ್ದರಿಂದ ಕುಟುಂಬ ಸಂಬಂಧವನ್ನು ಸ್ಥಾಪಿಸುವವರೊಡನೆ ನಾನೂ ಸಂಬಂಧ ಸ್ಥಾಪಿಸುತ್ತೇನೆ ಮತ್ತು ಅವರೊಂದಿಗೆ ಸಂಬಂಧ ಮುರಿಯುವವರೊಡನೆ ನಾನೂ ಸಂಬಂಧ ಮುರಿಯುತ್ತೇನೆ." (ತಿರ್ಮಿದಿ)

ಅಲ್ಲಾಹನು ನಿಮ್ಮೊಂದಿಗೆ ಸಂಬಂಧ ಬೆಳೆಸಬೇಕೆಂದು ನೀವು ಬಯಸುವಿರಾದರೆ ನೀವು ಅವರೊಂದಿಗೆ ನಿಕಟತೆಯನ್ನು ಕಾಯ್ದುಕೊಳ್ಳಬೇಕು. ಅವರಿಂದ ದೂರವಾಗ ದಂತೆ ಎಚ್ಚರವಹಿಸಬೇಕು. ಅವರು ನಿಮ್ಮಿಂದ ದೂರ ಸರಿದರೂ ನೀವು ದೂರವಾಗ

ಬಾರದು. ಅವರಿಗೆ ಸಹಾಯ ಮಾಡಿ ಸೇವೆ ಸಲ್ಲಿಸುವುದರಲ್ಲಿ ಸಂತೋಷ ಮತ್ತು ಸಂತೃಪ್ತಿಯನ್ನು ಕಂಡುಕೊಳ್ಳಿರಿ.

ಕುಟುಂಬ ಸಂಬಂಧ ಮುರಿಯುವುದನ್ನು ಕುರ್‌ಆನ್ ಕಟುವಾಗಿ ವಿರೋಧಿಸಿದೆ.

**"ಅಲ್ಲಾಹನೊಂದಿಗೆ ಬಲವಾದ ಕರಾರನ್ನು ಮಾಡಿಕೊಂಡ ಬಳಿಕ ಮುರಿದು ಬಿಡುವವರು, ಅಲ್ಲಾಹನು ಜೋಡಿಸಲು ಆಜ್ಞೆ ಕೊಟ್ಟಂತಹ ಸಂಬಂಧಗಳನ್ನು ಮುರಿಯುವವರು ಮತ್ತು ಭೂಮಿಯ ಮೇಲೆ ಗೊಂದಲ ಹಬ್ಬಿಸುತ್ತಿರುವವರು ಶಾಪಕ್ಕೆ ಅರ್ಹರು. ಅವರಿಗೆ ಪರಲೋಕದಲ್ಲಿ ಅತ್ಯಂತ ಕೆಟ್ಟ ನಿವಾಸವಿದೆ." (ಪವಿತ್ರ ಕುರ್‌ಆನ್, 13:25)**

ಪ್ರವಾದಿ(ಸ) ಹೇಳಿದರು, "ಯಾರಾದರೂ ಅಲ್ಲಾಹನಲ್ಲಿಯೂ ಅಂತ್ಯ ದಿನದಲ್ಲಿಯೂ ವಿಶ್ವಾಸವಿರಿಸುವುದಿದ್ದರೆ, ಆತನು ತನ್ನ ಕುಟುಂಬ ಸಂಬಂಧವನ್ನು ಬೆಸೆಯಲಿ." (ಬುಖಾರಿ)

"ಕುಟುಂಬ ಸಂಬಂಧವನ್ನು ಕಡಿಯುವಾತನು ಸ್ವರ್ಗದಲ್ಲಿ ಪ್ರವೇಶಿಸಲಾರನು." (ಬುಖಾರಿ, ಮುಸ್ಲಿಮ್)

ಕುಟುಂಬ ಸಂಬಂಧ ಜೋಡಣೆಗೆ ಮತ್ತು ದಾನ ನೀಡುವುದಕ್ಕೆ ಕ್ಷಿಪ್ರ ಪ್ರತಿಫಲ ದೊರೆಯುತ್ತದೆ. ಕುಟುಂಬ ಸಂಬಂಧವನ್ನು ಮುರಿಯುವುದಕ್ಕೆ ಮತ್ತು ಅಕ್ರಮಕ್ಕೆ ಕ್ಷಿಪ್ರ ಶಿಕ್ಷೆ ದೊರೆಯುತ್ತದೆ.

ಕುಟುಂಬ ಸಂಬಂಧಕ್ಕೆ ಕುರ್‌ಆನ್ ನೀಡಿದ ವ್ಯಾಪ್ತಿ ಮತ್ತು ಗಮನವು ಬಹಳ ಚಿಂತನಾರ್ಹವಾಗಿದೆ.

**"ಒಬ್ಬ ಕುರುಡ, ಕುಂಟ ಅಥವಾ ರೋಗಿಯು (ಇತರರ ಮನೆಯಲ್ಲಿ ಉಂಡರೆ) ದೋಷವಿಲ್ಲ. ನೀವು ನಿಮ್ಮ ಮನೆಗಳಲ್ಲಿ, ನಿಮ್ಮ ತಂದೆ-ತಾತಂದಿರ ಮನೆಗಳಲ್ಲಿ, ನಿಮ್ಮ ತಾಯಂದಿರ ಮನೆಗಳಲ್ಲಿ ಅಥವಾ ನಿಮ್ಮ ಸಹೋದರರ ಮನೆಗಳಲ್ಲಿ ಅಥವಾ ನಿಮ್ಮ ಸಹೋದರಿಯರ ಮನೆಗಳಲ್ಲಿ ಅಥವಾ ನಿಮ್ಮ ಪಿತೃ ಸಹೋದರರ ಮನೆಗಳಲ್ಲಿ ಅಥವಾ ನಿಮ್ಮ ಸೋದರತ್ತೆಯಂದಿರ ಮನೆಗಳಲ್ಲಿ ಅಥವಾ ನಿಮ್ಮ ಸೋದರ ಮಾವಂದಿರ ಮನೆಗಳಲ್ಲಿ ಅಥವಾ ನಿಮ್ಮ ಮಾತೃ ಸೋದರಿಯರ ಮನೆಗಳಲ್ಲಿ ಅಥವಾ ಬೀಗದ ಕೈಗಳು ನಿಮ್ಮ ವಶದಲ್ಲಿರುವ ಮನೆಗಳಲ್ಲಿ ಅಥವಾ ನಿಮ್ಮ ಮಿತ್ರರ ಮನೆಗಳಲ್ಲಿ ಉಣ್ಣುವುದರಲ್ಲಿ ಅಡ್ಡಿಯಿಲ್ಲ. ನೀವು ಒಟ್ಟಾಗಿ ಉಣ್ಣುವುದರಲ್ಲೂ ಬೇರೆ ಬೇರೆಯಾಗಿ ಉಣ್ಣುವುದರಲ್ಲೂ ಆಕ್ಷೇಪವಿಲ್ಲ." (ಪವಿತ್ರ ಕುರ್‌ಆನ್, 24:61)**

ಅತ್ಯಂತ ನಿಕಟ ಸಂಬಂಧಿಕರು ಯಾರೆಂದು ಸೂಚಿಸುವ ಈ ಕುರ್‌ಆನ್ ವಚನವು ಅವರ ಮನೆಗಳು ತಮ್ಮ ಸ್ವಂತ ಮನೆಗಳಾಗಿದ್ದು, ಹಾಗೆಯೇ ಆಗಿರಬೇಕೆಂದು ಕಲಿಸುತ್ತದೆ.

ತನ್ನ ಮತ್ತು ತನ್ನ ಜೀವನ ಸಂಗಾತಿಯ ಆಪ್ತ ಸಂಬಂಧಿಕರೊಂದಿಗಿನ ವ್ಯವಹಾರ ವರ್ತನೆಗಳು ಮರಣೋತ್ತರ ಜೀವನದ ಜಯಾಪಜಯಗಳಲ್ಲಿ ಪ್ರಮುಖ ಪಾತ್ರ ವಹಿಸುವುದೆಂಬುದನ್ನು ಮರೆಯಬಾರದು. ಆದ್ದರಿಂದ ನೀವು ಕುಟುಂಬ ಸಂಬಂಧವನ್ನು ಭದ್ರ

ಗೊಳಿಸಲಿಕ್ಕಾಗಿ ಗರಿಷ್ಠ ಪ್ರಯತ್ನಿಸಬೇಕು. ಪತಿಯನ್ನು ಅದಕ್ಕಾಗಿ ಪ್ರೇರೇಪಿಸಬೇಕು. ಪತಿಯ ಆಪ್ತ ಸಂಬಂಧಿಕರಿಂದ ದೂರವಾಗಬಾರದು. ಹಾಗೆಯೇ ಪತಿಯನ್ನು ಅವರಿಂದ ದೂರ ಮಾಡಬಾರದು. ಒಂದು ವೇಳೆ ಈ ರೀತಿ ಏನಾದರೂ ಸಂಭವಿಸಿ ಬಿಟ್ಟರೆ ಅದು ಅಲ್ಲಾಹನಿಂದ ದೂರ ಸರಿಯಲು ಕಾರಣವಾದೀತು. ಅದರಿಂದಾಗಿ ಪರಲೋಕ ದಲ್ಲಿಯೂ ನಷ್ಟ ಅನುಭವಿಸಬೇಕಾದೀತು.

# ಮನೆ: ಅನುಗ್ರಹ ಮತ್ತು ಶಾಪ

ಸ್ವಂತ ಮನೆಯು ಪ್ರತಿಯೊಬ್ಬರ ಕನಸು. ವಾಸಕ್ಕೆ ಅನುಕೂಲವಾದ ಒಂದು ತಾಣಬೇಕು. ಆದ್ದರಿಂದ ಮನೆ ವಿಶಾಲವಾಗಿರಬೇಕು. ಶುಚಿಯಾಗಿರಬೇಕು. ಸುಲಭದಲ್ಲಿ ಶುಚಿಗೊಳಿಸುವಂತಿರಬೇಕು.

ಆದರೆ ನಮ್ಮ ಮನೆ ಯಾರಿಗಾಗಿ? ಕೇವಲ ನಮಗಾಗಿದೆಯೇ? ಹಾಗಾದರೆ ನಮಗೆ ವಾಸಿಸಲು ಎಷ್ಟು ಕೋಣೆಗಳು ಬೇಕು? ನಾಲ್ಕೈದು ಸದಸ್ಯರಿರುವ ಕುಟುಂಬಕ್ಕೆ ಹತ್ತು-ಹನ್ನೆರಡು ಕೋಣೆಗಳ ಮನೆಯೇಕೆ? ಎಷ್ಟೇ ಕೋಣೆಗಳಿದ್ದರೂ ಕೇವಲ ಒಂದು ಕೋಣೆಯಲ್ಲಿಯೇ ವಾಸಿಸಲು ಸಾಧ್ಯ. ಏಕ ಕಾಲದಲ್ಲಿ ಎರಡು ಕೋಣೆಗಳಲ್ಲಿ ಮಲಗಲು ಸಾಧ್ಯವಿಲ್ಲವಷ್ಟೆ.

ನಮಗಾಗಿಯೇ ಮನೆ ನಿರ್ಮಿಸಲಾಗಿದೆಯೆಂದಾದರೆ ಅದನ್ನು ಒಳ ಮೈಗಿಂತ ಹೆಚ್ಚಾಗಿ ಹೊರ ಮೈ ಅಲಂಕರಿಸುವುದೇಕೆ? ಹೊರ ಅಲಂಕಾರಗಳಿಗಾಗಿ ಲಕ್ಷಗಟ್ಟಲೆ ಖರ್ಚು ಮಾಡುವುದೇಕೆ?

ಇಂದು ಹೆಚ್ಚಿನವರು ಕೇವಲ ವಾಸಿಸಲಿಕ್ಕಾಗಿ ಮನೆ ನಿರ್ಮಿಸುವುದಲ್ಲ. ಆಡಂಬರ, ಅಹಂಭಾವ ಪ್ರದರ್ಶನಕ್ಕಾಗಿದೆ. ಆದ್ದರಿಂದ ಮನೆಗೆ ಬಂದವರಿಗೆಲ್ಲ ಬಚ್ಚಲು ಕೋಣೆ ಸೇರಿದಂತೆ ಮನೆಯ ಎಲ್ಲ ಕೋಣೆಗಳನ್ನೂ ತೋರಿಸುತ್ತಾರೆ. ಮನೆ ನಿರ್ಮಾಣಕ್ಕೆ ಬಳಸಲಾದ ಕಲ್ಲು, ಮರಳು, ಮರ, ಸರಳು, ಸಿಮೆಂಟು ಮತ್ತು ಪೈಂಟ್ ಇತ್ಯಾದಿಗಳ ಶ್ರೇಷ್ಠತೆಯನ್ನು ನಿರರ್ಗಳವಾಗಿ ಹೇಳುತ್ತಾರೆ. ಮನೆ ಕಟ್ಟಿದವರ ಹಿರಿಮೆಯನ್ನು ಹೇಳುತ್ತಲಿರುತ್ತಾರೆ. ಆದರೆ ಮನೆಯ ಗಾತ್ರ ಮತ್ತು ಅಂದ-ಚೆಂದವನ್ನು ಘನತೆ-ಗೌರವಗಳ ಸಂಕೇತವೆಂದು ಭಾವಿಸುವ ಅರ್ಥ ಶೂನ್ಯತೆಯು, ಸ್ವಲ್ಪ ಆಲೋಚಿಸಿದರೆ ಯಾರಿಗೂ ಮನವರಿಕೆಯಾದೀತು. ಉತ್ತಮ ಗುಣನಡತೆ, ಶಿಷ್ಟಾಚಾರ, ಸೇವಾ ಚಟುವಟಿಕೆ, ಸತ್ಕರ್ಮ ಅಥವಾ ಪರಿಶುದ್ಧ ಜೀವನದಿಂದ ವ್ಯಕ್ತಿತ್ವವನ್ನು ಬೆಳೆಸಲಾಗದ ಅವಿವೇಕಿಗಳು, ಪೇಟೆಯಲ್ಲಿ ಖರೀದಿಸುವ ಕಲ್ಲು, ಮರಳು, ಸರಳು, ಸಿಮೆಂಟ್, ಮರ ಮತ್ತು ಪೈಂಟ್‌ಗಳಿಂದ ಅದನ್ನು ಸಾಧಿಸಲು ಪ್ರಯತ್ನಿಸುತ್ತಾರೆ. ನನ್ನನ್ನು ನಿರ್ಲಕ್ಷಿಸಲಾಗುತ್ತಿದೆ ಯೆಂಬ ಭಾವನೆಯಿಂದ ಕೀಳರಿಮೆ ಅನುಭವಿಸುವವರು ಭವ್ಯ ಬಂಗಲೆಗಳನ್ನು ನಿರ್ಮಿಸಿ ಜಂಭ ತೋರಿಸುತ್ತಾರೆ. ವಾಸ್ತವದಲ್ಲಿ ಕಲ್ಲು ಮತ್ತು ಮರಳಿನಿಂದ ಸಮಾಜದ ಗಮನ ಸೆಳೆದು ಪ್ರಭಾವ ಬೀರಲು ಪ್ರಯತ್ನಿಸುವುದಕ್ಕಿಂತ ನಾಚಿಕೆಗೇಡಿನ ವಿಷಯ ಬೇರೊಂದಿಲ್ಲ.

ಮನೆ ನಿರ್ಮಿಸಿ ಜಂಭಪಡುವ ಕ್ರಮವು ಇಂದು ನಿನ್ನೆ ಆರಂಭವಾದುದಲ್ಲ. ಅದಕ್ಕೆ ಸಹಸ್ರಾರು ವರ್ಷಗಳ ಪ್ರಾಚೀನತೆಯಿದೆ. ಅಲ್ಲಾಹನ ಶಾಪಕೋಪಗಳಿಗೆ ಗುರಿಯಾಗಿ ಭೂಮಿಯಲ್ಲಿಯೇ ಸರ್ವನಾಶವಾದ ಕೆಲವು ಜನಾಂಗಗಳ ಕಥೆಯನ್ನು ಕುರ್‌ಆನಿನಲ್ಲಿ ಉದ್ಧರಿಸಲಾಗಿದೆ. ಆದ್ ಮತ್ತು ಸಮೂದ್ ಎಂಬೆರಡು ಜನಾಂಗಗಳೂ ಅದರಲ್ಲಿ ಸೇರಿವೆ. ಅವರು, ಬೆಟ್ಟದ ಮೇಲೆ ಮನೆ ನಿರ್ಮಿಸಿ ದುರಹಂಕಾರ ಪಡುತ್ತಿದ್ದರು. ಆದ್ದರಿಂದ ಅವರಿಗೆ ನೇಮಕಗೊಂಡ ಪ್ರವಾದಿ ಹೂದ್‌ರು ಆ ಕೆಡುಕನ್ನು ತೊರೆಯುವಂತೆ ವಿನಂತಿಸಿದರು. ಅವರು ಒಪ್ಪಲಿಲ್ಲ. ಆದ್ದರಿಂದ ಅವರು ಅಲ್ಲಾಹನ ಶಾಪಕೋಪಗಳಿಗೆ ಗುರಿಯಾದರು. ಅವನು ಅವರನ್ನು ಸರ್ವನಾಶಗೊಳಿಸಿದನು. ಸಮೂದ್ ಗೋತ್ರವು ಪರ್ವತಗಳಲ್ಲಿ ಬಂಡೆಗಳನ್ನು ಕೊರೆದು ಮನೆ ನಿರ್ಮಿಸಿ ಆಡಂಬರ ಪ್ರದರ್ಶಿಸುತ್ತಿದ್ದರು. ಅವರಿಗೆ ನೇಮಕಗೊಂಡ ಪ್ರವಾದಿ ಸಾಲಿಹ್‌ರು ಈ ಪಾಪಕೃತ್ಯವನ್ನು ತೊರೆಯುವಂತೆ ಅವರಿಗೆ ಆಜ್ಞಾಪಿಸಿದರು. ಅವರು ಅದನ್ನು ಪಾಲಿಸಲಿಲ್ಲ. ಅತಿ ಉದ್ಧಟತನ ತೋರಿಸಿದರು. ಆದರಿಂದಾಗಿ ಅಲ್ಲಾಹನು ಅವರನ್ನು ದಂಡಿಸಿದನು. ಅಲ್ಲಾಹನು ಅವರನ್ನು ಸಂಪೂರ್ಣವಾಗಿ ನಾಶಗೊಳಿಸಿದನು. ಆದರೂ ಅವರ ಮನೆಗಳ ಅವಶೇಷವು ಸೌದಿ ಅರೇಬಿಯಾದಲ್ಲಿ ಇಂದಿಗೂ ಎಲ್ಲರೂ ನೋಡಿ ತಿಳಿಯಬಹುದಾದ ರೀತಿಯಲ್ಲಿ ಅಲ್ಲಾಹನು ಬಾಕಿ ಉಳಿಸಿದ್ದಾನೆ. ಅದರೊಂದಿಗೆ ಕುರ್‌ಆನ್ ಅವರ ವಿನಾಶದ ಕಥೆಯನ್ನು ಲೋಕಾವಸಾನದ ತನಕದ ಎಲ್ಲರಿಗೂ ಪಾಠವಾಗುವ ರೀತಿಯಲ್ಲಿ ಹೇಳಿ ಕೊಟ್ಟಿದೆ.

"ನಿಮ್ಮ ಪ್ರಭು ಉನ್ನತ ಸ್ತಂಭಗಳ ಆದ್ ಇರಮ್‌ನವರೊಂದಿಗೆ ಹೇಗೆ ವರ್ತಿಸಿದನೆಂಬುದನ್ನು ನೀವು ನೋಡಲಿಲ್ಲವೇ? ಅವರಂತಹ ಯಾವ ಜನಾಂಗವೂ ಜಗತ್ತಿನ ನಾಡುಗಳಲ್ಲಿ ಸೃಷ್ಟಿಸಲ್ಪಟ್ಟಿರಲಿಲ್ಲ. ಕಣಿವೆಗಳಲ್ಲಿ ಬಂಡೆಗಳನ್ನು ಕೊರೆದಿದ್ದ ಸಮೂದ ರೊಂದಿಗೆ ಮತ್ತು ಮೊಳೆಗಳವನಾದ ಫಿರ್‌ಔನನೊಂದಿಗೆ(ಅವನು ಹೇಗೆ ವರ್ತಿಸಿದ ನೆಂಬುದನ್ನು ನೀವು ನೋಡಲಿಲ್ಲವೇ?) ಇವರು ಜಗತ್ತಿನ ನಾಡುಗಳಲ್ಲಿ ವಿದ್ರೋಹವೆಸಗಿ ದವರಾಗಿದ್ದರು ಮತ್ತು ಅಲ್ಲಿ ಬಹಳಷ್ಟು ಕ್ಷೋಭೆ ಹರಡಿದ್ದರು. ಕೊನೆಗೆ ನಿಮ್ಮ ಪ್ರಭು ಅವರ ಮೇಲೆ ಯಾತನೆಯ ಕೊರಡೆಯನ್ನು ಬಾರಿಸಿಬಿಟ್ಟನು."

(ಪವಿತ್ರ ಕುರ್‌ಆನ್, 89:6-13)

"ಸಮೂದರಂತು ಒಂದು ಭೀಕರ ಅಪಘಾತದ ಮೂಲಕ ನಾಶಗೊಳಿಸಲ್ಪಟ್ಟರು ಮತ್ತು ಆದ್ ಒಂದು ತೀವ್ರ ಚಂಡಮಾರುತದಿಂದ ನಾಶ ಗೊಳಿಸಲ್ಪಟ್ಟರು ಅಲ್ಲಾಹನು ಅದನ್ನು ನಿರಂತರ ಏಳು ರಾತ್ರೆ ಮತ್ತು ಎಂಟು ಹಗಲುಗಳ ಕಾಲ ಅವರ ಮೇಲೆ ಹೇರಿಟ್ಟನು. (ನೀವು ಅಲ್ಲಿರುತ್ತಿದ್ದರೆ) ಅವರು ಅಲ್ಲಿ ಖರ್ಜೂರದ ಟೊಳ್ಳಾದ ಕಾಂಡ ಗಳಂತೆ ಬಿದ್ದಿರುವುದನ್ನು ಕಾಣುತ್ತಿದ್ದಿರಿ. ಈಗ ಅವರ ಪೈಕಿ ಯಾರಾದರೂ ಉಳಿದಿರುವುದು ನಿಮಗೆ ಕಾಣಸುತ್ತಿದೆಯೇ?" (ಪವಿತ್ರ ಕುರ್‌ಆನ್, 69:5-8)

ನಾವು ಈಗ ಪರಸ್ಪರ ಪ್ರಶ್ನಿಸೋಣ: ಆದ್, ಸಮೂದ್ ಜನಾಂಗಗಳ ಇತಿಹಾಸದಿಂದ ನೀವು ಪಾಠ ಕಲಿತಿದ್ದೀರಾ? ಕುರ್‌ಆನಿನ ಎಚ್ಚರಿಕೆಯನ್ನು ಮನೆ ನಿರ್ಮಿಸುವಾಗ ಜ್ಞಾಪಿಸಿದ್ದೀರಾ? ಒಣ ಜಂಭ ಮತ್ತು ಆಡಂಬರ ಪ್ರದರ್ಶಿಸುವಂತಹ ಏನಾದರೂ ನಿಮ್ಮ ಮನೆಯಲ್ಲಿದೆಯೇ? ನಿಮ್ಮ ಮನೆಯ ಹೊರಗೆ ಅಗತ್ಯವಿಲ್ಲದ ಏನನ್ನಾದರೂ ಮಾಡಿದ್ದೀರಾ? ಅಗತ್ಯ, ಅತ್ಯಗತ್ಯ ಎಂಬ ಯಾದಿಗೆ ಸೇರದ ಏನಾದರೂ ನಿಮ್ಮ ಮನೆಯಲ್ಲಿದೆಯೇ?

ನಿಮ್ಮ ಮನೆಯ ಹೆಬ್ಬಾಗಿಲಿಗೆ ಎಷ್ಟು ಹಣ ಖರ್ಚಾಗಿದೆ? ಅದು ದೃಢ, ಭದ್ರ ಮತ್ತು ಸುಂದರವಿರಬೇಕೆಂಬ ಬಗ್ಗೆ ಭಿನ್ನಾಭಿಪ್ರಾಯವಿರಲಾರದು. ಆದರೆ ಲಕ್ಷಾಂತರ ರೂಪಾಯಿಗಳ ಬೆಲೆಯ ಬಾಗಿಲೇಕೆ? ಹಲವು ಸಾವಿರಗಳ ಕಿಟಕಿಗಳೇಕೆ?

ನಿಮಗೆ ಸ್ವಾಗತ ಕೋಣೆಯಲ್ಲಿರುವ ಆಸನಗಳು ಕೇವಲ ಕುಳಿತುಕೊಳ್ಳಲಿಕ್ಕಾಗಿವೆಯೇ? ಅಥವಾ ಘನತೆ ಪ್ರದರ್ಶಿಸಲಿಕ್ಕಾಗಿದೆಯೇ? ಕುಳಿತುಕೊಳ್ಳಲು ಅಷ್ಟೊಂದು ದುಬಾರಿ ಕುರ್ಚಿಗಳೇಕೆ? ಕುಳಿತುಕೊಳ್ಳುವಾತನಿಗೆ ಮಾನಸಿಕ ನೆಮ್ಮದಿಯಿದ್ದರೆ ಯಾವ ಕುರ್ಚಿಯಲ್ಲಿ ಕುಳಿತರೂ ಆರಾಮವೆನಿಸುತ್ತದೆ. ಅನ್ಯಥಾ ಲಕ್ಷಗಟ್ಟಲೆ ರೂ. ಬೆಲೆಯ ಕುರ್ಚಿಯಲ್ಲಿ ಕುಳಿತರೂ ಸಮಾಧಾನವಿರಲಾರದು.

ಮಲಗುವ ಮಂಚದ ಬೆಲೆ ಎಷ್ಟು? ಮಲಗಲು ಒಂದು ಲಕ್ಷ ಅಥವಾ ಒಂದೂವರೆ ಲಕ್ಷದ ಮಂಚವೇಕೆ? ಮಂಚದ ಬೆಲೆಯ ಹೆಚ್ಚು ಕಡಿಮೆಯಿಂದ ನಿದ್ರೆಗೆ ತೊಂದರೆಯಾಗಲಾರದೆಂದು ತಿಳಿಯದವರಾರು? ಮಂಚದ ಬೆಲೆ ಕಡಿಮೆಯಾಗಿರುವುದರಿಂದ ಯಾರಿಗಾದರೂ ನಿದ್ದೆ ಬಾರದಿರುತ್ತದೆಯೇ?

ನಿಮ್ಮ ಮನೆಯಲ್ಲಿ ಶೋಕೇಸ್(ಪ್ರದರ್ಶನ ಕಪಾಟು) ಇಲ್ಲವೇ? ಅದರಲ್ಲಿ ಏನಿದೆ? ಪಾತ್ರೆ ಮತ್ತು ಗ್ಲಾಸುಗಳೇ? ಅವುಗಳನ್ನು ಆಹಾರ ಸೇವನೆಗೆ ಬಳಸಲಾಗುತ್ತಿದೆಯೇ ಅಥವಾ ಕೇವಲ ವೀಕ್ಷಣೆಗಾಗಿದೆಯೇ? ವರ್ಷದಲ್ಲಿ ಒಮ್ಮೆಯೂ ಬಳಸದ ಗೃಹೋಪಕರಣಗಳು ನಿಮ್ಮ ಶೋಕೇಸ್‌ನಲ್ಲಿವೆಯೇ?

ನಮ್ಮ ದೇಶದ ಹೆಚ್ಚಿನವರಿಗೆ ಸ್ವಂತ ಮನೆಯು ಇಂದಿಗೂ ಕನಸು ಅಥವಾ ಕಲ್ಪನೆಯಾಗಿದೆ. ತಲೆ ಒರಗಿಸಲಿಕ್ಕಾಗಿ ಹಾದಿ ಬದಿಗಳನ್ನು ಅವಲಂಬಿಸುವವರೂ ವಿರಳವಾಗಿಲ್ಲ. ಲಕ್ಷಗಟ್ಟಲೆ ಸ್ತ್ರೀಯರು, ಮಕ್ಕಳು, ಬಿಸಿಲು, ಮಳೆ ಚಳಿಗಳನ್ನು ತಡೆಯಲಾಗದ ಕೊಳೆಗೇರಿಗಳಲ್ಲಿ ದಿನ ದೂಡುತ್ತಾರೆ. ಎಲ್ಲ ರೀತಿಯ ಸುಖ ಸೌಲಭ್ಯಗಳಿಂದ ಮನೆಗಳಲ್ಲಿ ವಾಸಿಸುವ ನೀವು ಅಂಥವರ ಕುರಿತು ಜ್ಞಾಪಿಸುತ್ತೀರಾ? ಬಾಗಿಲು, ಸೋಫಾ, ಮಂಚಗಳಿಗಾಗಿ ಲಕ್ಷಗಟ್ಟಲೆ ವ್ಯಯಿಸುವ ಪೈಶಾಚಿಕ ದುಂದುಗಾರಿಕೆಯನ್ನು ತೊರೆದು ಮಿತತನವನ್ನು ಪಾಲಿಸದೆ ಬಡವರಿಗೆ ನೆರವಾದರೆ ಉಭಯ ಲೋಕಗಳಲ್ಲಿಯೂ ಅನುಗ್ರಹದಾಯಕವಾದೀತು. ಆ ಮೂಲಕ ಈ ಲೋಕದಲ್ಲಿ ಬಡವರ ಸಂಕಷ್ಟಗಳನ್ನು ನಿವಾರಿಸಬಹುದು. ಪರಲೋಕದಲ್ಲಿ ಅಲ್ಲಾಹನ ಶಿಕ್ಷೆಯಿಂದ ಪಾರಾಗಿ ಪ್ರತಿಫಲಕ್ಕೆ ಅರ್ಹರಾಗಬಹುದು.

ಹತ್ತಿಪ್ಪತ್ತು ವರ್ಷ ಗಲ್ಫ್‌ನಲ್ಲಿ ದುಡಿದು ದೊರೆತ ಏಳೆಂಟು ಲಕ್ಷಗಳಿಂದ ಮನೆ ನಿರ್ಮಿಸಿ ಕೆಲಸ ಕಳೆದುಕೊಂಡು ಊರಿಗೆ ಮರಳಿದಾಗ ಅದನ್ನು ಸುಧಾರಿಸಲು ಸಾಧ್ಯ ವಾಗುವುದಿಲ್ಲ. ಆರೋಗ್ಯ ಕಾಲದ ಸಂಪಾದನೆಯನ್ನು ಸಂಪೂರ್ಣವಾಗಿ ಮನೆ ನಿರ್ಮಾಣಕ್ಕೆ ಬಳಸಿ ಬದುಕಿಗೆ ಕಷ್ಟ ಪಡುವವರು ಧಾರಾಳವಾಗಿದ್ದಾರೆ. ಬೃಹತ್ ಬಂಗಲೆಗಳನ್ನು ಮಾತ್ರ ಮಕ್ಕಳಿಗೆ ಬಿಟ್ಟು ಮರಣ ಹೊಂದುವವರೂ ವಿರಳವಲ್ಲ. ಅದರಿಂದ ಮಕ್ಕಳಿಗೆ ಆ ಮನೆಯು ಈ ಲೋಕದಲ್ಲಿಯೇ ಶಾಪ ಮತ್ತು ಪೀಡೆಯಾಗಿ ಮಾರ್ಪಡುತ್ತದೆ. ಸದಾ ನೆನಪಿಡಿ. ಮನೆಗಾಗಿ ವ್ಯಯಿಸುವ ಒಂದು ರೂಪಾಯಿಯೂ ಮರಳಿ ದೊರೆಯಲಾರದು. ಮನೆಯನ್ನು ವಿಶಾಲ ಮತ್ತು ಭವ್ಯಗೊಳಿಸಿದಂತೆಯೇ ಅದರ ಉಸ್ತುವಾರಿಯ ವೆಚ್ಚವೂ ಹೆಚ್ಚುತ್ತದೆ.

ನಾವು ಇನ್ನೊಮ್ಮೆ ಪ್ರಶ್ನಿಸೋಣ: ನಮ್ಮ ಮನೆಯು ನಮಗೆ ಅನುಗ್ರಹವಾಗಿದೆಯೇ ಅಥವಾ ಶಾಪವಾಗಿದೆಯೇ? ಇಸ್ಲಾಮ್ ಕಟುವಾಗಿ ನಿಷೇಧಿಸಿರುವ ಮತ್ತು ಕುರ್‌ಆನ್ ಪೈಶಾಚಿಕವೆಂದು ವರ್ಣಿಸಿರುವ ದುಂದುಗಾರಿಕೆ ಅಥವಾ ಆಡಂಬರದ ಏನಾದರೂ ಅದರಲ್ಲಿದೆಯೇ? ವಿಚಾರಣಾ ವೇಳೆಯಲ್ಲಿ ಅಲ್ಲಾಹನು ಪ್ರಶ್ನಿಸಿದರೆ ಉತ್ತರ ಹೇಳಲು ಪೇಚಾಡುವಂಥ ಏನಾದರೂ ನಮ್ಮ ಮನೆ ನಿರ್ಮಾಣದಲ್ಲಿ ಅಥವಾ ಮನೆಯ ಪೀಠೋ ಪಕರಣಗಳಲ್ಲಿ ಇದೆಯೇ? ಇದ್ದರೆ ಪ್ರಾಮಾಣಿಕವಾಗಿ ಪಶ್ಚಾತ್ತಾಪಪಡಿರಿ. ಮಕ್ಕಳಿಗೂ ಆಪ್ತೇಷ್ಟರಿಗಾಗಿಯೂ ಮನೆ ನಿರ್ಮಿಸುವಾಗ, ಪೀಠೋಪಕರಣಗಳನ್ನು ಖರೀದಿಸುವಾಗ ತಪ್ಪು ಸಂಭವಿಸದಂತೆ ಎಚ್ಚರವಹಿಸಿ ಅದರೊಂದಿಗೆ ಸಾಧ್ಯವಿರುವಷ್ಟು ತಿದ್ದುಪಡಿ ಗಳನ್ನು ಮಾಡಿಕೊಳ್ಳಿರಿ.

# ಆಭರಣದ ಭ್ರಾಂತಿ

ಗಲಭೆ ಪೀಡಿತ ಪ್ರದೇಶದಲ್ಲಿ ದುಷ್ಕರ್ಮಿಗಳ ಆಕ್ರಮಣ ಮತ್ತು ಕೊಳ್ಳಿಯಿಡುಕೆಗೆ ಗುರಿಯಾದ ಮನೆಗಳ ಸಮೀಕ್ಷೆಗೆ ಹೋಗಿದ್ದೆ. ಪುರುಷರಿಲ್ಲದ ಮನೆಗಳು ಆಕ್ರಮಣಕ್ಕೆ ಗುರಿಯಾಗಿದ್ದುವು. ಮಾರಕಾಯುಧಗಳ ಸಹಿತ ದುಷ್ಕರ್ಮಿಗಳು ಬರುವುದನ್ನು ನೋಡಿ ಮಕ್ಕಳು, ಮಹಿಳೆಯರು ಓಡಿ ಹೋಗುತ್ತಿದ್ದರು. ಜನರಿಲ್ಲದ ಮನೆಗಳನ್ನು ಹಿಂಸಾ ನಿರತರ ಗುಂಪು ದೋಚಿತ್ತು. ಬಾಗಿಲು, ಕಿಟಕಿ, ಮಂಚ, ಮೇಜು, ಕುರ್ಚಿ ಇತ್ಯಾದಿ ಪೀಠೋಪಕರಣಗಳನ್ನು ಧ್ವಂಸಗೊಳಿಸಿ ಬೆಂಕಿ ಹಚ್ಚಿದ್ದರು. ಕೆಲವು ಮನೆಗಳು ಸಂಪೂರ್ಣ ಉರಿದಿತ್ತು.

ಎಲ್ಲ ಮನೆಗಳಲ್ಲಿಯೂ ವ್ಯಾಪಕ ಲೂಟಿ ನಡೆದಿತ್ತು. ಚಿನ್ನಾಭರಣಗಳನ್ನು ಹೆಚ್ಚಾಗಿ ದೋಚಲಾಗಿತ್ತು. ಅತಿ ಬಡವರ ಮನೆಗಳಿಂದಲೂ ಐದು ಹತ್ತಿಪ್ಪತ್ತು ಪವನು ಚಿನ್ನ ದೋಚಿರುವುದಾಗಿ ತಿಳಿದುಬಂತು. ಮನೆಯ ಮೇಜು, ಕಪಾಟುಗಳಲ್ಲಿ ಜೋಪಾನವಿರಿಸಿದ ಆಭರಣಗಳು ದೋಚಲ್ಪಟ್ಟಿದ್ದುವು. ಮನೆಯ ಸ್ತ್ರೀಯರು ಅವುಗಳನ್ನು ಬಿಟ್ಟು ಪ್ರಾಣ ಭಯದಿಂದ ಓಡಿ ಹೋಗಿದ್ದರು.

ಈ ಘಟನೆಯ ಹಿನ್ನಲೆಯಲ್ಲಿ ಅನೇಕ ಪ್ರಶ್ನೆಗಳನ್ನು ನಾವೇ ಕೇಳಿ ಅವುಗಳಿಗೆ ಉತ್ತರಕಂಡು ಹಿಡಿಯಬೇಕಾಗಿದೆ. ಆ ಪೈಕಿ ಕೇವಲ ಪರೋಕ್ಷವಾದ ಒಂದೇ ಪ್ರಶ್ನೆಯನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ. ಅದು ಎಲ್ಲರಿಗೂ ಅನ್ವಯವಾಗುತ್ತದೆ. ಬದುಕುವ ಪರಿಸರವು ಶಾಂತಿಪೂರ್ಣವಾಗಿದ್ದರೂ ಗಲಭೆಗ್ರಸ್ತವಾಗಿದ್ದರು.

ನಿಮ್ಮಲ್ಲಿ ಎಷ್ಟು ಪವನು ಚಿನ್ನವಿದೆ? ನೀವು ಅವುಗಳನ್ನು ಯಾವಾಗಲೂ ಧರಿಸುತ್ತೀರಾ? ನೀವು ಆಭರಣ ಧರಿಸುವುದೇಕೆ? ಆಭರಣವು ಸ್ತ್ರೀಯರ ಸೌಂದರ್ಯ ವರ್ಧನೆ ಮತ್ತು ಸಿಂಗಾರಕ್ಕಾಗಿದೆಯೆಂದು ನೀವು ತಿಳಿದಿದ್ದೀರಾ? ಹಾಗಾದರೆ ನೀವು ಅವುಗಳನ್ನು ಆ ಉದ್ದೇಶಕ್ಕಾಗಿಯೇ ಬಳಸುತ್ತಿರುವಿರಾ? ನಿಮ್ಮ ಸೌಂದರ್ಯ ಸವಿಯುವ ಅರ್ಹತೆಯಿರುವ ಏಕೈಕ ವ್ಯಕ್ತಿ ನಿಮ್ಮ ಪತಿಯಲ್ಲವೇ? ಹಾಗಾದರೆ ನೀವು ಪತಿಯ ಜತೆಯಲ್ಲಿ ಮನೆಯಲ್ಲಿರುವಾಗ ಆಭರಣ ಧರಿಸಬೇಕಾಗಿದೆಯಷ್ಟೆ. ಪತಿಯ ಜತೆಯಲ್ಲಿ ಮಲಗಿ ನಿದ್ರಿಸುವಾಗ ಧರಿಸಬಹುದಾದ ಗರಿಷ್ಠ ಆಭರಣ ಎಷ್ಟು? 25, 30, 40 ಪವನಿನ ಚಿನ್ನಾಭರಣ ಧರಿಸಿ ಯಾರಾದರೂ ಮಲಗಿ ನಿದ್ರಿಸುತ್ತಾರೆಯೇ? ಯಾವ ಸ್ತ್ರೀಗಾದರೂ ಅದು ಸಾಧ್ಯವೇ? ಹೀಗಿರುತ್ತಾ, 25, 50, ನೂರು ಪವನುಗಳ ಚಿನ್ನಾಭರಣವೇಕೆ?

ಯಾವಾಗಲಾದರೂ ಸ್ತ್ರೀಯು ಮನೆಯಲ್ಲಿರುವಾಗ ಅವುಗಳನ್ನು ಬಳಸುತ್ತಾಳೆಯೇ? ಇಲ್ಲದಿದ್ದರೆ ಅವುಗಳನ್ನು ಧರಿಸುವುದು ಯಾವಾಗ? ಮನೆಯಿಂದ ಹೊರಗೆ ಹೋಗುವಾಗಲ್ಲವೇ? ಮದುವೆ, ಔತಣ, ಕುಟುಂಬ ಭೇಟಿ, ಆಸ್ಪತ್ರೆಗೆ ರೋಗಿಯ ಸಂದರ್ಶನಕ್ಕೆ ಹೋಗುವಾಗ ಧರಿಸುವುದಲ್ಲವೇ? ಹಾಗಾದರೆ ಅದು ಸೌಂದರ್ಯವರ್ಧನೆ ಮತ್ತು ಸಿಂಗಾರವಾಗಿಯೇ? ಅಥವಾ ಆಡಂಬರ ಪ್ರದರ್ಶನವಾಗಿಯೇ? ಡಂಬಾಚಾರ ಘೋರ ಪಾಪವಲ್ಲವೇ? ದೇಹಪೂರ್ತಿ ಆಭರಣ ಧರಿಸುವುದು ಅಲಂಕಾರವಲ್ಲ. ಆಭಾಸಕರವೆಂದು ತಿಳಿಯದ ಯಾರಾದರೂ ಇದ್ದಾರೆಯೇ? ಹಾಗಾದರೆ ಮನೆಯಲ್ಲಿ ಉಪಯೋಗಿಸದ ಆಭರಣಗಳನ್ನು ಹೊರಗೆ ಹೋಗುವಾಗ ಧರಿಸುವುದು, ಇತರರಿಗೆ ತೋರಿಸಲಿಕ್ಕಾಗಿಯಲ್ಲವೇ? ಡಂಬಾಚಾರವು ಮಹಾ ಪಾಪ ಮತ್ತು ಪೈಶಾಚಿಕವೆಂದು ನಿಮಗೆ ತಿಳಿಯದೇ? ಆಡಂಬರ ಪ್ರದರ್ಶನವು ಭೂಮಿಯಲ್ಲಿ ವಿನಾಶಕರ ಮತ್ತು ಪರಲೋಕದಲ್ಲಿ ಘೋರ ಶಿಕ್ಷೆಗೆ ಕಾರಣವಾಗುವುದೆಂಬ ವಿಷಯ ನೆನಪಿಲ್ಲವೇ? ಆದ್ದರಿಂದ ಅಹಂಕಾರ ಪ್ರದರ್ಶನಕ್ಕಾಗಿ ಆಭರಣ ಧರಿಸುವುದನ್ನು ತೊರೆಯಿರಿ. ನಿತ್ಯ ಜೀವನದಲ್ಲಿ ಸಾಮಾನ್ಯ ಬಳಸುವುದಕ್ಕಿಂತ ಹೆಚ್ಚಿನ ಆಭರಣವನ್ನು ಇರಿಸಿಕೊಳ್ಳಬೇಡಿರಿ. ಅತ್ಯವಶ್ಯಕವಿರುವಷ್ಟು ಮಾತ್ರ ನಿಮ್ಮ ಬಳಿಯಿದೆಯೆಂದು ಖಾತ್ರಿಪಡಿಸಿರಿ.

ಚಿನ್ನವನ್ನು ಯಾರೂ ತಿನ್ನುವುದಿಲ್ಲ. ಅದು ಸ್ವತಃ ಕರಗಿ ಹೋಗುವುದಿಲ್ಲ. ತುಕ್ಕು ಹಿಡಿಯುವುದಿಲ್ಲ. ಹಾಗಿದ್ದರೂ ನಮ್ಮ ಪೇಟೆ ಪಟ್ಟಣಗಳಲ್ಲಿ ಇಷ್ಟೊಂದು ಪ್ರಮಾಣದಲ್ಲಿ ಚಿನ್ನದ ಅಂಗಡಿಗಳಿರಲು ಕಾರಣವೇನು? ಅನೇಕ ಕಡೆಗಳಲ್ಲಿ ಜೀನಸು ಅಂಗಡಿಗಳಿಗಿಂತ ಹೆಚ್ಚು ಚಿನ್ನದ ಅಂಗಡಿಗಳಿಲ್ಲವೇ? ಬೇರೆ ವ್ಯಾಪಾರಗಳಲ್ಲಿ ನಷ್ಟ ಸಂಭವಿಸಿದರೂ ಚಿನ್ನದ ಅಂಗಡಿಗಳು ಲಾಭದಲ್ಲಿ ನಡೆಯುತ್ತಿವೆ. ಜಾಹೀರಾತು ಮತ್ತು ಅಂಗಡಿಗಳ ಅಲಂಕಾರಕ್ಕಾಗಿಯೂ ಚಿನ್ನದ ವ್ಯಾಪಾರಿಗಳು ಧಾರಾಳವಾಗಿ ಹಣ ಖರ್ಚು ಮಾಡುತ್ತಾರೆ. ಇದರ ಖರ್ಚು ಯಾರು ವಹಿಸುವರೆಂದು ನೀವು ಎಂದಾದರೂ ಆಲೋಚಿಸಿದ್ದೀರಾ? ಅಥವಾ ಶೋಷಣೆಗೆ ಗುರಿಯಾಗುವವರು ಯಾರು? ನೆನಪಿರಲಿ, ಎಲ್ಲವನ್ನೂ ಆಭರಣ ಖರೀದಿಸುವ ಗ್ರಾಹಕನೇ ಸಹಿಸಬೇಕು.

ನೀವು ಆಭರಣ ಖರೀದಿಸುವಾಗ ಮಜೂರಿ, ಕೆಲಸದ ತೇಮಾನು ಎಂಬ ಪದಗಳನ್ನು ಕೇಳಿದ್ದೀರಾ? ಅವೆರಡೂ ನಿಮ್ಮಿಂದ ಹಣ ಸುಲಿಯುವ ಮಾತುಗಳೆಂದು ನೆನಪಿರಲಿ ಅಥವಾ ಮಜೂರಿ ಮತ್ತು ತೇಮಾನು ಇಲ್ಲದೆಯೂ ಮೋಸ ನಡೆಯುತ್ತದೆ. ನೀವು ನಿಮ್ಮ ಹಳೆಯ ಆಭರಣವನ್ನು ಕೊಟ್ಟು, ಹೊಸತನ್ನು ಖರೀದಿಸುತ್ತೀರಾ? ಆಗ ಆಗುವ ನಷ್ಟದ ಬಗ್ಗೆ ಆಲೋಚಿಸಿದ್ದೀರಾ?

ಫ್ಯಾಶನ್‌ನ ಹೆಸರಲ್ಲಿ ಚಿನ್ನಾಭರಣಗಳನ್ನು ಪದೇಪದೇ ಬದಲಾಯಿಸುವ ಸಂಪ್ರದಾಯವಿಲ್ಲದಿರುತ್ತಿದ್ದರೆ ಈಗ ಇರುವುದರ ಕಾಲಂಶ ಚಿನ್ನದಂಗಡಿಗಳೂ ಇರುತ್ತಿರಲಿಲ್ಲ. ಹೆಚ್ಚಿನವರು 2-3 ವರ್ಷ ಹಳೆಯ ಆಭರಣಗಳನ್ನು ಧರಿಸುವುದಿಲ್ಲ.

ಅವುಗಳನ್ನು ಮಾರಿ ಹೊಸತು ಖರೀದಿಸುತ್ತಾರೆ. ಇದು ಅನವಶ್ಯಕ ದುರ್ವ್ಯಯವಾಗಿದೆ. ಆದ್ದರಿಂದ ಮಹಾಪಾಪವೂ ಆಗಿದೆ.

ನಿಮಗೆ ಆಭರಣದೊಂದಿಗೆ ಕುರುಡು ಪ್ರೇಮವಿಲ್ಲದಿದ್ದರೆ ನೀವು ಆಭರಣವನ್ನು ಕೈ ಬಿಟ್ಟು ಆ ಹಣವನ್ನು ಆದಾಯವಿರುವ ಯಾವುದಾದರೂ ವ್ಯಾಪಾರದಲ್ಲಿ ಹೂಡ ಬಾರದೇ? ನಿಮ್ಮ ಪತಿಗೆ ಅದು ಒಪ್ಪಿಗೆಯಾಗಲಾರದೇ? ಮಗಳಿಗೆ ವಿವಾಹ ಮಾಡಿಸುವಾಗ ನೀವು ಆಭರಣ ನೀಡಲು ನಿರ್ಬಂಧಿತರಾಗಬಹುದು. ಆದರೆ ಮಗನು ವಿವಾಹವಾಗುವಾಗ ಮಗನ ಪತ್ನಿಗೆ(ಸೊಸೆಗೆ) ಅತ್ಯವಶ್ಯಕವಲ್ಲದ ಆಭರಣಗಳು ಬೇಡವೆನ್ನಲು ನಿಮಗೆ ಸಾಧ್ಯವಿಲ್ಲವೇ? ಕೆಲವು ಅತ್ತೆಯಂದಿರಾದರೂ ತಮ್ಮ ಸೊಸೆಗೆ ನಿತ್ಯ ಜೀವನದಲ್ಲಿ ಉಪಯೋಗಿಸುವುದಕ್ಕಿಂತ ಹೆಚ್ಚಿನ ಒಡವೆಗಳು ಬೇಡವೆಂದು ನಿರ್ಧರಿಸಿದರೆ ಕೋಟಿ ಗಟ್ಟಲೆ ಹಣವು ಕಪಾಟುಗಳಲ್ಲಿ ಜಡವಾಗಿರುವ ಸ್ಥಿತಿಯು ಕೊನೆಗೊಳ್ಳಲಾರದೇ?

ನೆನಪಿರಲಿ- ಉಪಯೋಗಿಸದ ಆಭರಣಗಳನ್ನು ಕಪಾಟು ಮತ್ತು ಲಾಕರ್‌ಗಳಲ್ಲಿ ಶೇಖರಿಸಿಡುವುದು ಮಹಾ ಪಾಪವಾಗಿದೆ. ಅಲ್ಲಾಹನು ಹೇಳಿರುತ್ತಾನೆ:

**"ಚಿನ್ನವನ್ನೂ ಬೆಳ್ಳಿಯನ್ನೂ ಸಂಗ್ರಹಿಸಿಟ್ಟು ಅವುಗಳನ್ನು ದೇವ ಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ನೀಡಿರಿ. ಈ ಚಿನ್ನ-ಬೆಳ್ಳಿಗಳ ಮೇಲೆ ನರಕಾಗ್ನಿಯನ್ನು ಉರಿಸಲಾಗುವುದು. ತರುವಾಯ ಅದರಿಂದಲೇ ಅವರ ಹಣೆಗಳಿಗೂ ಪಾರ್ಶ್ವಗಳಿಗೂ ಬೆನ್ನುಗಳಿಗೂ ಬರೆ ಹಾಕಲಾಗುವುದು. 'ನೀವು ನಿಮಗಾಗಿ ಸಂಗ್ರಹಿಸಿಟ್ಟಿದ್ದ ಸಂಪತ್ತು ಇದುವೇ, ಈಗ ನೀವು ಕೂಡಿಹಾಕಿದ್ದ ಸಂಪತ್ತನ್ನು ಸವಿಯಿರಿ' (ಎನ್ನಲಾಗುವುದು.)" (ಪವಿತ್ರ ಕುರ್‌ಆನ್, 9:34-35)**

50, 100, 150 ಪವನುಗಳ ಆಭರಣಗಳು ಅಗತ್ಯ ಅಥವಾ ಅತ್ಯಗತ್ಯವಲ್ಲ. ಆದಕ್ಕಾಗಿ ಹಣ ವ್ಯಯಿಸುವುದು ದುಂದುವೆಚ್ಚವಾಗಿದೆ. ಅದು ಘೋರ ಅಪರಾಧವಾಗಿದೆ.

**"ದುರ್ವ್ಯಯ ಮಾಡಬೇಡಿರಿ. ದುರ್ವ್ಯಯ ಮಾಡುವವರನ್ನು ಅಲ್ಲಾಹನು ಮೆಚ್ಚುವುದಿಲ್ಲ." (ಪವಿತ್ರ ಕುರ್‌ಆನ್, 6:141)**

**"ಸಂಬಂಧಿಕನಿಗೆ ಅವನ ಹಕ್ಕನ್ನೂ, ದರಿದ್ರನಿಗೂ, ಪ್ರಯಾಣಿಕನಿಗೂ ಅವನವನ ಹಕ್ಕನ್ನೂ ಕೊಡಿರಿ. ದುಂದುವೆಚ್ಚ ಮಾಡಬೇಡಿರಿ. ದುಂದುಗಾರರು ಶೈತಾನನ ಸೋದರ ರಾಗಿರುತ್ತಾರೆ ಮತ್ತು ಶೈತಾನನು ತನ್ನ ಪ್ರಭುವಿಗೆ ಕೃತಘ್ನನು."**

**(ಪವಿತ್ರ ಕುರ್‌ಆನ್, 17:26-27)**

ನೀವು ಕೈ, ಕಾಲು, ಕೊರಳು, ಕಿವಿ, ತಲೆ, ಹಣೆಗಳಿಗೆ ಆಭರಣ ಧರಿಸಿ ಹೋಗುವಾಗ ಸಮಾಜದ ಬಡ ಮಹಿಳೆಯರು ಅವುಗಳನ್ನು ದಿಟ್ಟಿಸಿ ನೋಡುವುದಿಲ್ಲವೇ? ಅವರ ದೃಷ್ಟಿಯು ನಿಮ್ಮ ಆಭರಣಗಳಲ್ಲಿ ನಾಟಿರುವುದಿಲ್ಲವೇ? ಆಗ ಅವರ ಮನಸ್ಸು ಕೊರಗಿ ಕ್ರಮೇಣ ಅಸೂಯೆ ಮೂಡಿಸುವುದೆಂದು ನೀವು ಬಲ್ಲಿರಾ? ಅಸೂಯೆಯ ಕಾಟದಿಂದ ರಕ್ಷಿಸುವಂತೆ ಸದಾ ಪ್ರಾರ್ಥಿಸಬೇಕೆಂದು ಅಲ್ಲಾಹನು ಹೇಳಿರುವಾಗ ಇತರರಲ್ಲಿ ಅಸೂಯೆ ಮೂಡಿಸುವ ಕಾರ್ಯವನ್ನು ತೊರೆಯುವುದು ಉತ್ತಮವಲ್ಲವೇ?

ಇನ್ನೊಮ್ಮೆ ಸ್ವತಃ ಪ್ರಶ್ನಿಸಿರಿ, 'ನಾನು ಆಭರಣವನ್ನು ಯಾಕೆ ಧರಿಸುತ್ತೇನೆ?' ಅದು ಆಡಂಬರ ಪ್ರದರ್ಶನಕ್ಕೆಂದಾದರೆ ನರಕ ಖಚಿತ.

ಪ್ರವಾದಿ(ಸ) ಹೇಳಿದ್ದಾರೆ, "ನರಕವಾಸಿಗಳು ಯಾರೆಂದು ನಾನು ನಿಮಗೆ ತಿಳಿಸುತ್ತೇನೆ. ಎಲ್ಲ ಧಿಕ್ಕಾರಿಗಳು, ಅಹಂಕಾರಿಗಳು ಮತ್ತು ಡಾಂಭಿಕರು." (ಬುಖಾರಿ, ಮುಸ್ಲಿಮ್)

# ನಮ್ಮನ್ನು ಯಾರು ನಿಯಂತ್ರಿಸುತ್ತಾರೆ?

ನಿಮ್ಮ ಮನೆಯಲ್ಲಿ ಎಷ್ಟು ಕೋಣೆಗಳಿವೆ? ಕುಟುಂಬದ ಎಲ್ಲರೂ ಸೇರಿರುವಾಗಲೂ ಉಪಯೋಗಿಸದ ಕೋಣೆಗಳಿವೆಯೇ?

ನಿಮ್ಮ ಡ್ರೆಸ್ಸಿಂಗ್ ಹಾಲ್‌ನ ಶೋಕೇಸ್‌ಗಳಲ್ಲಿ ತಿಂಗಳುಗಟ್ಟಲೆ ಉಪಯೋಗಿಸದ ಎಷ್ಟು ಪಾತ್ರೆಗಳಿವೆ? ಸಾಮಾನ್ಯವಾಗಿ ಬಳಸಲಾಗದ ಬೆಲೆಬಾಳುವ ಏನಾದರೂ ಅದರಲ್ಲಿದೆಯೇ?

ಮನೆಗೆ ಸಾಮಾನುಗಳನ್ನು ಖರೀದಿಸಲು ಹೊರಡುವಾಗ ಅವಶ್ಯಕ ವಸ್ತುಗಳ ಯಾದಿ ತಯಾರಿಸುತ್ತೀರಾ? ಅವಶ್ಯಕ, ಅತ್ಯಾವಶ್ಯಕ, ಅನಾವಶ್ಯಕ ಎಂಬೀ ಮಾನದಂಡಗಳಿಂದ ಅವುಗಳನ್ನು ಪರಿಶೀಲಿಸುತ್ತೀರಾ? ನೆರೆಕರೆಯ ಮತ್ತು ಸಂಬಂಧಿಕರ ಮನೆಯ ಸೌಲಭ್ಯ, ಅನುಕೂಲತೆ, ಜೀವನ ವಿಧಾನಗಳು ನಿಮ್ಮ ಮೇಲೆ ಪ್ರಭಾವ ಬೀರುತ್ತವೆಯೇ? ಅಲ್ಲಿ ಕಾಣಸಿದ ಹೊಸ ವಸ್ತುಗಳು ಮತ್ತು ಸೌಲಭ್ಯಗಳು ನಿಮಗೂ ಇರಬೇಕೆಂದು ಬಯಸುತ್ತೀರಾ?

ಇಂಥ ಅನೇಕ ಪ್ರಶ್ನೆಗಳನ್ನು ನಾವು ನಮ್ಮೊಡನೆಯೇ ಕೇಳಬೇಕು. ಯಾಕೆಂದರೆ ನಮ್ಮ ಜೀವನದ ಮೇಲಿನ ನಮ್ಮ ಹಿಡಿತ ಸಡಿಲಗೊಂಡಿದೆ. ಇಂದು ನಮ್ಮನ್ನು ನಾವೇ ನಿಯಂತ್ರಿಸುತ್ತಿಲ್ಲ. ಮಾರುಕಟ್ಟೆ ನಿಯಂತ್ರಿಸುತ್ತಿದೆ. ಅದು ಲಾಭದ ಹೊರತು ಬೇರೆ ಯಾವುದೇ ಮೌಲ್ಯವನ್ನು ಹೊಂದಿಲ್ಲದ ಬೃಹತ್ ಉದ್ದಿಮೆದಾರರು. ಅವರು ನಮ್ಮನ್ನು ಅಧೀನಗೊಳಿಸಿ ಗಾಳಕ್ಕೆ ಸಿಲುಕಿಸಲು ಜಾಹೀರಾತನ್ನು ಪ್ರಬಲ ಅಸ್ತ್ರವಾಗಿ ಬಳಸುತ್ತಿದ್ದಾರೆ.

ಜಾಹೀರಾತು ಇಂದು ಜನ ಜೀವನದ ಅವಿಭಾಜ್ಯ ಅಂಗವಾಗಿ ಮಾರ್ಪಟ್ಟಿದೆ. ದೈನಿಕ, ಸಾಪ್ತಾಹಿಕ, ಮಾಸಿಕ, ರೇಡಿಯೋ, ಟಿ.ವಿ., ಇಂಟರ್‌ನೆಟ್, ಸಿನೆಮಾ, ಜಾಹೀರಾತು ಫಲಕ-ಹೀಗೆ ನಾನಾ ರೂಪಗಳಲ್ಲಿ ಅವು ನಮ್ಮ ಮುಂದೆ ಪ್ರತ್ಯಕ್ಷ ವಾಗುತ್ತವೆ. ದೈನಂದಿನ ಜೀವನದಲ್ಲಿ ಅನುಮತಿಯಿಲ್ಲದೆಯೇ ಪ್ರವೇಶಿಸುತ್ತವೆ. ಅವು ನಮ್ಮನ್ನು ಅತಿಯಾಗಿ ಪ್ರಲೋಭಿಸುತ್ತವೆ. ನಮ್ಮ ಸುಪ್ತ ಮನಸ್ಸಿನಲ್ಲಿಯೂ ಪರಿಣಾಮ ಬೀರುತ್ತದೆ. ಆ ಮೂಲಕ ಉತ್ಪನ್ನಗಳು ನಮ್ಮ ಜೀವನದಲ್ಲಿ ನುಸುಳಲು ಪ್ರಯತ್ನಿಸುತ್ತವೆ.

ಜಾಹೀರಾತುಗಳು ಹಲವೊಮ್ಮೆ ನಮ್ಮ ಭಾವನೆಗಳನ್ನು ಸ್ವಾಧೀನಪಡಿಸುತ್ತವೆ. ಅವು ನಮ್ಮ ಮನಸ್ಸಿನಲ್ಲಿ ಹಲವು ಹೊಸ ವ್ಯಾಮೋಹಗಳನ್ನು ಹುಟ್ಟಿಸುತ್ತವೆ. ಆಲೋಚನೆಗೆ ಅವಕಾಶ ನೀಡದೆ ಅವುಗಳನ್ನು ಸಾಕ್ಷಾತ್ಕರಿಸುವ ಹಂಬಲವನ್ನು

ಹೆಚ್ಚಿಸುತ್ತವೆ. ಹೀಗೆ ನಾವಿಂದು ಹೊಸಹೊಸ ಬೇಡಿಕೆಗಳ ಗುಲಾಮರಾಗಿ ಮಾರ್ಪಡುತ್ತಿದ್ದೇವೆ. ತೀರಾ ಅನಾವಶ್ಯಕವಾಗಿರುವವುಗಳನ್ನೂ ಅವಶ್ಯಕ ವಸ್ತುಗಳೆಂಬ ಭಾವನೆಯನ್ನು ಜಾಹೀರಾತುಗಳು ಮೂಡಿಸುತ್ತವೆ.

ನಮ್ಮನ್ನು ಮೋಡಿಗೊಳಿಸುವ ನಿಟ್ಟಿನಲ್ಲಿ ಜಾಹೀರಾತುಗಳು ಪ್ರಮುಖ ಪಾತ್ರ ವಹಿಸುತ್ತವೆ. ಮನರಂಜಿಸುವ ಜಾಹೀರಾತುಗಳು ನಮ್ಮ ಆಲೋಚನೆಯನ್ನು ನಂದಿಸುತ್ತವೆ. ಪಾರಂಪರ್ಯಗಳಿಂದ ನಮ್ಮನ್ನು ಕೀಳುತ್ತವೆ. ಜೀವನದ ಎಲ್ಲ ರಂಗಗಳಲ್ಲಿಯೂ ನುಸುಳುತ್ತವೆ. ನಾವು ಏನನ್ನು ತಿನ್ನಬೇಕು, ಏನನ್ನು ತಿನ್ನಬಾರದು, ಯಾವ ಪಾತ್ರೆಯಲ್ಲಿ ಕುಡಿಯಬೇಕು, ಯಾವ ಬಟ್ಟೆ ಧರಿಸಬೇಕು, ಹೇಗೆ ಧರಿಸಬೇಕು, ತಲೆಗೆ ಯಾವ ತೈಲ ಹಚ್ಚಬೇಕು, ತಲೆ ಹೇಗೆ ಬಾಚಬೇಕು, ಯಾವ ಬ್ರಶ್‌ನಿಂದ ಯಾವ ಪೇಸ್ಟ್ ಉಪಯೋಗಿಸಿ ಹಲ್ಲು ತಿಕ್ಕಬೇಕು, ಮುಖ ಹೇಗೆ ಶುಚಿಗೊಳಿಸಬೇಕು, ಯಾವ ಸೌಂದರ್ಯ ವರ್ಧಕ ವಸ್ತುವನ್ನು ಹೇಗೆ ಬಳಸಬೇಕು, ಹೇಗೆ ಸ್ನಾನ ಮಾಡಬೇಕು, ನಡೆಯುವುದು, ಕುಳಿತುಕೊಳ್ಳುವುದು, ಮಲಗುವುದು ಹೇಗೆ? ಹೇಗೆ ನೋಡಬೇಕು, ಹೇಗೆ ನಗಬೇಕು- ಹೀಗೆ ಸಣ್ಣ ದೊಡ್ಡ ಪ್ರತಿಯೊಂದು ವಿಷಯಗಳನ್ನೂ ಸಮಾಜದೊಂದಿಗೆ ಯಾವುದೇ ಜವಾಬ್ದಾರಿಯಿಲ್ಲದ ಸ್ವಾರ್ಥ ಲಂಪಟ ಉದ್ದಿಮೆದಾರರು ನಿರ್ಣಯಿಸುತ್ತಾರೆ. ಆಕರ್ಷಕ ಜಾಹೀರಾತುಗಳು ಅವರ ಮಾತುಗಳಿಗೆ ಸಮಾಜದಲ್ಲಿ ಮನ್ನಣೆ ದೊರಕಿಸುತ್ತವೆ. ಆದ್ದರಿಂದ ಇಂದು ಹೆಚ್ಚಿನವರ ಬಯಕೆ, ಇಚ್ಛೆಗಳನ್ನು ಜಾಹೀರಾತುಗಳು ನಿರ್ಣಯಿಸುತ್ತವೆ. ಗುಣನಡತೆಗಳನ್ನೂ ಅವುಗಳೇ ನಿಯಂತ್ರಿಸುತ್ತವೆ.

ಧನ ಮೋಹಿಗಳಾದ ಉದ್ದಿಮೆದಾರರು ಮತ್ತು ಅವರ ಜಾಹೀರಾತುಗಳು ಇಂದು ನಮ್ಮ ಸಮಾಜದಲ್ಲಿ ಘನತೆಯ ಚಿಹ್ನೆಗಳನ್ನು ನಿರ್ಧರಿಸುತ್ತವೆ. ಸಂತೃಪ್ತ ದಾಂಪತ್ಯ ಮತ್ತು ಸುಭದ್ರ ಕುಟುಂಬ ಜೀವನವೂ ಪೇಟೆಯಲ್ಲಿ ಖರೀದಿಸಲು ದೊರೆಯುವುದೆಂಬ ಭಾವನೆಯನ್ನು ಅವು ಬೆಳೆಸುತ್ತವೆ. ನೆರೆಕರೆಯವರಲ್ಲಿ ಅಸೂಯೆ ಬೆಳೆಸುವ ವಿದ್ಯೆಯನ್ನು ಎಲ್ಲರಿಗೂ ಕಲಿಸಲಾಗುತ್ತಿದೆ. ಆದ್ದರಿಂದ ಇಂದು ಸಮಾಜಕ್ಕೆ ಪ್ರೀತಿ, ಕರುಣೆ, ವಾತ್ಸಲ್ಯ ಭಾವನೆಗಳ ಬದಲಿಗೆ ದ್ವೇಷ, ಮತ್ಸರದ ಭಾವನೆಗಳಿವೆ. ಹೀಗೆ ಜಾಹೀರಾತುಗಳು ನಮ್ಮ ಜೀವನದ ಸಮತೋಲನ ತಪ್ಪಿಸಿವೆ. ಮೌಲ್ಯ ಕಲ್ಪನೆಯನ್ನು ಬದಲಾಯಿಸಿವೆ. ಇಂದು ಹೆಚ್ಚಿನವರ ಮನದಲ್ಲಿ ಜಾಹೀರಾತಿನಲ್ಲಿರುವ ರೂಪಗಳೇ ಮಾದರಿಯಾಗಿವೆ. ತನ್ನಿಮಿತ್ತ ಸೌಂದರ್ಯ ಕಲ್ಪನೆ ಮತ್ತು ವ್ಯಕ್ತಿತ್ವ ನಿರ್ಮಾಣದ ವೈವಿಧ್ಯತೆ ಕಳೆದು ಹೋಗಿದೆ. ಎಲ್ಲವೂ ಏಕಶಿಲಾ ರೂಪವಾಗಿ ಬಿಟ್ಟಿವೆ.

ಮಾನವನ ಪ್ರಾಥಮಿಕ ಬೇಡಿಕೆಗಳಿಗೆ ಜಾಹೀರಾತುಗಳಲ್ಲಿ ಪ್ರಾಮುಖ್ಯತೆ ದೊರೆಯುವುದಿಲ್ಲ. ಆದ್ದರಿಂದ ಜೀವನಕ್ಕೆ ಅಗತ್ಯವಿರುವ ಆಡಂಬರ ವಸ್ತುಗಳು ಅದರಲ್ಲಿ ತುಂಬಿವೆ. ಅವೆಲ್ಲವೂ ಅನಿವಾರ್ಯವೆಂಬ ಭಾವನೆ ಹುಟ್ಟಿಸಿ ಅವುಗಳನ್ನು ಸ್ವಾಧೀನ ಪಡಿಸಲಾಗದಿದ್ದರೆ ಅದೊಂದು ಮಹಾ ಕೊರತೆಯೆಂಬ ಭಾವನೆಯನ್ನು ಮೂಡಿಸುತ್ತದೆ.

ಹೀಗೆ ಎಲ್ಲರನ್ನೂ ದುಂದುಗಾರಿಕೆಗೆ ಪ್ರೇರೇಪಿಸುವ ಮನೋಶಾಸ್ತ್ರೀಯ ಯುದ್ಧವನ್ನು ಜಾಹೀರಾತುಗಳು ಇಂದು ನಡೆಸುತ್ತಿವೆ. ಸಮಾಜದ ಹೆಚ್ಚಿನ ಜನರು ಅದರ ಬಲಿಪಶು ವಾಗಿದ್ದಾರೆ.

ಆದ್ದರಿಂದ ನಾವು ಪುನಃ ಪರಸ್ಪರ ಪ್ರಶ್ನಿಸೋಣ. ಜಾಹೀರಾತುಗಳು ನಿಮ್ಮ ಮೇಲೆ ಪ್ರಭಾವ ಬೀರಿವೆಯೇ? ಅವುಗಳನ್ನು ನಂಬಿ ನೀವು ಯಾವುದಾದರೂ ವಸ್ತುವನ್ನು ಖರೀದಿಸುತ್ತೀರಾ? ಜಾಹೀರಾತು ನೋಡಿ, ಖರೀದಿಸಿ ನೀವು ಪರಿಚಿತರಾಗಿದ್ದೀರಾ? ಅಗತ್ಯ ವಿಲ್ಲದ ಯಾವುದಾದರೂ ವಸ್ತುವನ್ನು ಅತ್ಯಗತ್ಯವೆಂದು ನಿಮಗೆ ಮನಗಾಣಿಸಲು ಜಾಹೀರಾತಿ ನಿಂದ ಸಾಧ್ಯವಾಗಿದೆಯೇ? ದೂರದರ್ಶನದಲ್ಲಿ ತೋರಿಸುವ ಜಾಹೀರಾತುಗಳಲ್ಲಿರುವ ಉತ್ಪನ್ನಗಳನ್ನು ಖರೀದಿಸುವಾಗ, ಆ ಜಾಹೀರಾತಿಗೆ ನೀಡುವ ಲಕ್ಷಗಟ್ಟಲೆ ರೂ.ಗಳಲ್ಲಿ ನಿಮ್ಮ ದೇಣಿಗೆಯೂ ಇದೆಯೆಂಬುದನ್ನು ಜ್ಞಾಪಿಸುತ್ತೀರಾ? ಅಥವಾ ಜಾಹೀರಾತುಗಳಲ್ಲಿ ಧಾರಾಳವಾಗಿ ಪ್ರದರ್ಶಿತವಾಗುವ ಉತ್ಪನ್ನಗಳನ್ನು ಖರೀದಿಸುವವರು ಕಡಿಮೆ ಬೆಲೆಯ ವಸ್ತುಗಳಿಗೆ ದುಬಾರಿ ಬೆಲೆ ತೆರುವ ಮಹಾಮೂರ್ಖರೆಂಬ ತಿಳುವಳಿಕೆ ನಿಮಗಿದೆಯೇ?

ಇಂಥ ಪ್ರಶ್ನೆಗಳಿಗೆ ದೊರೆಯುವ ಉತ್ತರವು ಏನೇ ಆಗಿದ್ದರೂ ಕೆಲವು ವಿಷಯ ಗಳನ್ನು ನಾವು ನಿರ್ಣಯಿಸಬೇಕಾಗಿದೆ. ಕೈಗಾರಿಕಾ ಜಗತ್ತಿನ ಮಾರಾಟ ತಂತ್ರವನ್ನು ಗುರುತಿಸಿ ಜಾಹೀರಾತುಗಳ ಪ್ರಲೋಭನೆಗಳಿಗೆ ಸಿಲುಕದಂತೆ ಕಟ್ಟೆಚ್ಚರ ವಹಿಸಬೇಕು. ನಮ್ಮ ಜೀವನದ ಹತೋಟಿಯನ್ನು ಜಾಹೀರಾತು ಕಂಪೆನಿಗಳಿಗೆ ನೀಡದಿರುವ ಇಚ್ಛಾ ಶಕ್ತಿಯನ್ನು ಗಳಿಸಬೇಕು. ಹಾಗಾದರೆ, ಜಾಹೀರಾತಿನ ಪ್ರಳಯದಲ್ಲಿ ಮುಳುಗಿ ವ್ಯಕ್ತಿತ್ವವನ್ನು ಕಳೆದುಕೊಳ್ಳದೆ ಉಳಿಯಬಹುದು. ಅದು ಮಾರುಕಟ್ಟೆಯ ಗುಲಾಮರಾಗದೆ ಅದರ ಒಡೆಯರಾಗಲು ಅನಿವಾರ್ಯವಾಗಿದೆ.

# ನೀವು ಟಿ.ವಿ. ನೋಡುತ್ತೀರಾ?

ನೀವು ಟಿ.ವಿ. ನೋಡುತ್ತೀರಾ? ಹೌದೆಂದಾದರೆ ಯಾವಾಗ ನೋಡುತ್ತೀರಿ? ಏನನ್ನು ನೋಡುತ್ತೀರಿ? ಕೇವಲ ವಾರ್ತೆಗಳು ಮತ್ತು ವೈಜ್ಞಾನಿಕ ಕಾರ್ಯಕ್ರಮಗಳಿಗಾಗಿ ಮಾತ್ರ ತೆರೆಯುತ್ತೀರಾ? ಅಥವಾ ಸೀರಿಯಲ್‌ಗಳನ್ನು ನೋಡುತ್ತೀರಾ? ಪತಿ, ಮಕ್ಕಳು ಮತ್ತು ನೀವು ಒಟ್ಟಿಗೆ ಕುಳಿತು ಟಿ.ವಿ. ನೋಡುತ್ತೀರಾ? ತಂದೆ, ಸಹೋದರರು ಮತ್ತು ನೀವು ಒಟ್ಟಿಗೆ ಕುಳಿತು ಟಿ.ವಿ. ನೋಡುತ್ತೀರಾ?

ನೀವು ಟಿ.ವಿ. ನೋಡಲು ಯಾವಾಗ ಆರಂಭಿಸಿದ್ದೀರಿ? ಮೊದಲು ನೋಡಿದಾಗ ಅದರಲ್ಲಿ ಪ್ರತ್ಯಕ್ಷವಾದ ಅನೇಕ ದೃಶ್ಯಗಳು ನಿಮಗೆ ಅರೋಚಕವೆನಿಸಿರಲಿಲ್ಲವೇ? ಕ್ರಮೇಣ ಆಸಕ್ತಿ ಹೆಚ್ಚಾಯಿತಲ್ಲವೇ? ಹಿಂದೆ ಟಿ.ವಿ. ಕಾರ್ಯಕ್ರಮಗಳಲ್ಲಿ ಮಕ್ಕಳ ಜತೆಯಲ್ಲಿ ಅಥವಾ ತಂದೆ ಮತ್ತು ಸಹೋದರರ ಜತೆಯಲ್ಲಿ ಕುಳಿತು ನೋಡುವಾಗ ನಾಚಿಕೆಯೆನಿಸುವ ಹಲವು ರಂಗಗಳು ಇರಲಿಲ್ಲವೇ? ಕಾರ್ಯಕ್ರಮಗಳು ಉತ್ತಮಗೊಂಡುವೇ ಅಥವಾ ನಿಮ್ಮ ಲಜ್ಜಾ ಪ್ರಜ್ಞೆ ಕುಸಿಯಿತೇ? 'ಲಜ್ಜೆಯು ಸತ್ಯವಿಶ್ವಾಸದ ಅರ್ಧಾಂಶ' ಮತ್ತು 'ಲಜ್ಜೆಯಿಲ್ಲದಿದ್ದರೆ ತೋಚಿದ್ದೆಲ್ಲ ಮಾಡಿರಿ' ಎಂಬ ಪ್ರವಾದಿ ವಚನಗಳನ್ನು ನೀವು ಆಲಿಸಿದ್ದೀರಾ? ಮಾನವನ ಲಜ್ಜಾ ಪ್ರಜ್ಞೆಯು, ಮಾನವ ಮತ್ತು ಇತರ ಜೀವಿಗಳಲ್ಲಿರುವ ಮೂಲಭೂತ ವ್ಯತ್ಯಾಸವೆಂದು ತಿಳಿದಿದ್ದೀರಾ? ಅನೇಕ ಅಪರಾಧ ಕೃತ್ಯಗಳಿಂದ ಅದು ನಮ್ಮನ್ನು ತಡೆಯುವುದೆಂಬ ವಾಸ್ತವಿಕತೆಯನ್ನು ಜ್ಞಾಪಿಸುತ್ತೀರಾ? ಅದರೊಂದಿಗೆ ಟಿ.ವಿ.ಯು ನಮ್ಮಿಂದ ಪ್ರಥಮವಾಗಿ ಈ ಪ್ರಜ್ಞೆಯನ್ನು ಕಿತ್ತೆಸೆಯುವುದೆಂದು ಅರಿತಿದ್ದೀರಾ?

ಟಿ.ವಿ. ನೋಡುವಾಗ ನಿಮ್ಮ ಕಣ್ಣುಗಳ ಬಗ್ಗೆ ಆಲೋಚಿಸಿದ್ದೀರಾ? ಜಗತ್ತಿನ 600 ಕೋಟಿ ಮಾನವರ 1,200 ಕೋಟಿ ಕಣ್ಣುಗಳಿಗಿಂತ ನಿಮ್ಮ ಕಣ್ಣು ಭಿನ್ನವಾಗಿದೆಯೆಂದು ಬಲ್ಲಿರಾ? ಅಥವಾ ಅಲ್ಲಾಹನು ಬಹಳ ಸೂಕ್ಷ್ಮವಾಗಿ ನಿಮ್ಮ ಕಣ್ಣುಗಳನ್ನು ಸೃಷ್ಟಿಸಿದ್ದಾನೆಂದು ತಿಳಿದಿದ್ದೀರಾ?

ಕಳೆದ ಗಲ್ಫ್ ಯಾತ್ರೆಯಲ್ಲಿ ಶಾರ್ಜಾ ವಿಮಾನ ನಿಲ್ದಾಣದಲ್ಲಿ ಇಳಿದಿದ್ದೆ. ಕಳೆದ ಬಾರಿ ಸಂದರ್ಶಿಸಿದಾಗ ಸಾಕ್ಷಿಯಾಗಿ ಪಾಸ್‌ಪೋರ್ಟ್ ಪ್ರತಿಯನ್ನು ವಿಮಾನ ನಿಲ್ದಾಣದಲ್ಲಿ ತೆಗೆದಿರಿಸಿದ್ದರು. ಆದರೆ ಈ ಬಾರಿ ಅದರ ಬದಲಿಗೆ ಯಾತ್ರಿಕರ ಕಣ್ಣುಗಳ ಕಂಪ್ಯೂಟರ್ ಚಿತ್ರವನ್ನು ಸಾಕ್ಷ್ಯಕ್ಕಾಗಿ ಇರಿಸಿಕೊಂಡಿದ್ದರು. ನಮ್ಮಲ್ಲಿ ಪ್ರತಿಯೊಬ್ಬರ

ಕಣ್ಣುಗಳು ಜಗತ್ತಿನಲ್ಲಿರುವ 1,200 ಕೋಟಿ ಕಣ್ಣುಗಳಿಂದ ಪ್ರತ್ಯೇಕಿಸಿ ತಿಳಿಯಬಲ್ಲಷ್ಟು ಭಿನ್ನವಾಗಿದೆಯೆಂದು ಇದರಿಂದ ವ್ಯಕ್ತವಾಗುತ್ತದೆ. ಈ ರೀತಿ ವಿಶ್ವದೊಡೆಯನು ಜಾಗ್ರತೆಯಿಂದ ನಿಮ್ಮ ಕಣ್ಣುಗಳನ್ನು ಸೃಷ್ಟಿಸಿರುವುದು ಇಷ್ಟ ಬಂದಂತೆ ಬಳಸಲಿಕ್ಕಲ್ಲವೆಂದು ನೀವು ಗ್ರಹಿಸಿದ್ದೀರಾ? ಕಣ್ಣುಗಳ ಉಪಯೋಗದ ಕುರಿತು ಪರಲೋಕದಲ್ಲಿ ಪ್ರಶ್ನಿಸಲಾಗುವುದೆಂಬ ವಿಷಯವನ್ನು ಟಿ.ವಿ. ನೋಡುವಾಗ ಜ್ಞಾಪಿಸುತ್ತೀರಾ? ನಿಮಗೆ ನೀಡಿರುವ ಕಣ್ಣು ಮತ್ತು ಅದರ ಉಪಯೋಗದ ಕುರಿತು ಕುರ್‌ಆನ್ ಹೇಳಿದ ಮಾತುಗಳನ್ನು ಗಮನಿಸಿದ್ದೀರಾ? ಇಲ್ಲದಿದ್ದರೆ ಟಿ.ವಿ. ನೋಡುವಾಗ ಸ್ಮರಿಸಲಿಕ್ಕಾಗಿ ಕೆಲವು ವಚನಗಳನ್ನು ಇಲ್ಲಿ ಉದ್ಧರಿಸಲಾಗಿದೆ.

"ನೀವು ಕೃತಜ್ಞರಾಗಲಿಕ್ಕಾಗಿ. ಅವನು ನಿಮಗೆ ಶ್ರವಣ ಶಕ್ತಿಯನ್ನೂ ದೃಷ್ಟಿಗಳನ್ನೂ ವಿಚಾರ ಮಾಡುವ ಮನಸ್ಸುಗಳನ್ನೂ ನೀಡಿದನು.." **(ಪವಿತ್ರ ಕುರ್‌ಆನ್, 16:78)**

"ನಿಮ್ಮನ್ನು ಸೃಷ್ಟಿಸಿದವನು, ನಿಮಗೆ ಶ್ರವಣ ಹಾಗೂ ದೃಷ್ಟಿಯನ್ನು ನೀಡಿದವನು ಮತ್ತು ಚಿಂತಿಸುವ ಮನಸ್ಸುಗಳನ್ನು ನೀಡಿದವನು ಅಲ್ಲಾಹನೇ. ಆದರೆ, ನೀವು ಅತ್ಯಲ್ಪವೇ ಕೃತಜ್ಞತೆ ಸಲ್ಲಿಸುತ್ತೀರಿ." **(ಪವಿತ್ರ ಕುರ್‌ಆನ್, 67:23)**

"ಅಲ್ಲಾಹನು ದೃಷ್ಟಿಯ ಚೌರ್ಯಗಳನ್ನೂ ಹೃದಯದೊಳಗೆ ಬಚ್ಚಿಟ್ಟಿರುವ ರಹಸ್ಯಗಳನ್ನೂ ತಿಳಿಯುತ್ತಾನೆ." **(ಪವಿತ್ರ ಕುರ್‌ಆನ್, 40:19)**

"ನಿಶ್ಚಯವಾಗಿಯೂ ಶ್ರವಣ, ದೃಷ್ಟಿ ಮತ್ತು ಮನಸ್ಸು ಇವೆಲ್ಲವುಗಳ ವಿಚಾರಣೆ ನಡೆಯಲಿದೆ." **(ಪವಿತ್ರ ಕುರ್‌ಆನ್, 17:36)**

ಟಿ.ವಿ ನೋಡುವಾಗ ಸಮಯದ ಕುರಿತು ಆಲೋಚಿಸುತ್ತೀರಾ? ಕಳೆದು ಹೋದ ಕಾಲವು ಮರಳುವುದಿಲ್ಲ. ಉರುಳಿ ಹೋದ ದಿನಗಳು ಮರಳುವುದಿಲ್ಲವೆಂದು ಜ್ಞಾಪಿಸುತ್ತೀರಾ? ಆಯುಷ್ಯದಲ್ಲಿ ಕಡಿದು ಹೋಗುವ ತಂತುಗಳು ಮರಳಿ ಬರುವುದಿಲ್ಲ. ಆದ್ದರಿಂದ ಮರಣ ಹತ್ತಿರವಾಗುತ್ತಿದೆಯೆಂಬ ನೆನಪಿದೆಯೇ? ಸಮಯವನ್ನು ಯಾವುದಕ್ಕೆ ವ್ಯಯಿಸಿದೆಯೆಂದು ಪರಲೋಕದಲ್ಲಿ ಅಲ್ಲಾಹನು ವಿಚಾರಿಸುವನೆಂದು ಪ್ರವಾದಿಯವರು(ಸ) ಎಚ್ಚರಿಸಿದ್ದು ಗಮನಕ್ಕೆ ಬಂದಿದೆಯೇ? ಆ ಪ್ರವಾದಿ ವಚನವನ್ನು ಜ್ಞಾಪಿಸಿ ಸಮಯದ ಉಪಯೋಗದ ಬಗ್ಗೆ ಎಚ್ಚರ ವಹಿಸಿದ್ದೀರಾ? ಟಿ.ವಿ.ಯ ಮುಂದೆ ವ್ಯಯಿಸುವ ವೇಳೆಯನ್ನು ಉಪಯುಕ್ತ ಹಾಗೂ ಅಲ್ಲಾಹನು ಮೆಚ್ಚುವ ಮಾರ್ಗದಲ್ಲಿ ವ್ಯಯಿಸಲಾಗುತ್ತಿದೆಯೆಂದು ಖಾತ್ರಿಪಡಿಸಿದ್ದೀರಾ? ಟಿ.ವಿ.ಯು ನಿಮ್ಮ ಗುಣನಡತೆ, ವ್ಯವಹಾರ, ಮಾತು ವರ್ತನೆಗಳಲ್ಲಿ ಏನಾದರೂ ಬದಲಾವಣೆ ಮಾಡಿದೆಯೇ? ಆಹಾರ ಕ್ರಮ ಮತ್ತು ವಸ್ತ್ರಧಾರಣೆಯಲ್ಲಿ ಪ್ರಭಾವ ಬೀರುತ್ತಿದೆಯೇ? ಇದ್ದರೆ ಹಿತಕರವೋ ಹಾನಿಕರವೋ? ಟಿ.ವಿ.ಯು ನಿಮ್ಮ ಮನೆಯಲ್ಲಿ ಯಾವುದಾದರೂ ಅನವಶ್ಯಕ ವಸ್ತುವಿನ ಖರೀದಿಗೆ ಪ್ರೇರಕವಾಗಿದೆಯೇ? ಅದನ್ನು ನೋಡಲಾರಂಭಿಸಿದಂದಿನಿಂದ ನಮಾಝ್ ಮತ್ತಿತರ ಆರಾಧನಾ ಕರ್ಮಗಳಲ್ಲಿ ಶ್ರದ್ಧೆ ಕಡಿಮೆಯಾಗಿದೆಯೇ? ಪತಿ ಮತ್ತು ಮಕ್ಕಳ

ಜತೆಗಿನ ಪ್ರೀತಿ ಮತ್ತು ಅವರ ಕೆಲಸ ಕಾರ್ಯಗಳ ಬಗ್ಗೆ ಗಮನ ಕಡಿಮೆಯಾಗಿದೆಯೇ ಅಥವಾ ಹೆಚ್ಚಿದೆಯೇ? ಟಿ.ವಿ.ಯು ಕುರ್‌ಆನ್ ಪಾರಾಯಣ ಮತ್ತು ಅಧ್ಯಯನಕ್ಕೆ ಅಡ್ಡಿಯಾಗಿದೆಯೇ? ವಾಚನ ಕಡಿಮೆಯಾಗಲು ಕಾರಣವಾಗಿದೆಯೇ? ನೆರೆಕರೆಯವರು ಮತ್ತು ಸಂಬಂಧಿಕರು ಮನೆಗೆ ಬರುವುದು ಹೆಚ್ಚಿದೆಯೇ ಅಥವಾ ಕಡಿಮೆಯಾಗಿದೆಯೇ?

ಟಿ.ವಿ.ಯು ನಿಮ್ಮ ಮಕ್ಕಳ ಮೇಲೆ ಏನಾದರೂ ಪ್ರಭಾವ ಬೀರಿದೆಯೇ? ಅವರ ನಡಿಗೆ, ಅನ್ನ ಪಾನೀಯ, ಸ್ನಾನ, ಆಟ, ಕೇಶ, ಉಡುಪುಗಳ ಮೇಲೆ ಏನಾದರೂ ಪ್ರಭಾವ ಬೀರಿದೆಯೇ? ಟಿ.ವಿ.ಯಲ್ಲಿ ಆಲಿಸುವ ಸಂಭಾಷಣೆ ಮತ್ತು ಹಾಡುಗಳನ್ನು ಅವರು ಸದಾ ಆಲಾಪಿಸುತ್ತಾರೆಯೇ? ಅದರಲ್ಲಿ ನೋಡಿದ ನಡಿಗೆಯ ಶೈಲಿಯನ್ನು ಅನುಕರಿಸುತ್ತಿದ್ದಾರೆಯೇ? ಅವರಿಗೆ ಯಾರು ಹೆಚ್ಚು ಪ್ರಿಯರು? ಮನೆಯಲ್ಲಿರುವ ಸಹೋದರರೋ ಸಂಬಂಧಿಕರೋ ನೆರೆಕರೆಯವರೋ ಮಿತ್ರರೋ ಅಥವಾ ಟಿ.ವಿ.ಯಲ್ಲಿ ನಿತ್ಯ ಕಾಣಿಸುವ ನಟ ನಟಿಯರೋ?

ಟಿ.ವಿ.ಯಿಂದ ನಿಮ್ಮ ಮಕ್ಕಳ ಅಧ್ಯಯನಕ್ಕೆ ಅಡ್ಡಿಯಾಗುತ್ತಿದೆಯೇ? ಅವರು ಕಲಿಯುತ್ತಿರುವಾಗ ನೀವು ಟಿ.ವಿ. ನೋಡುತ್ತೀರಾ? ಹಾಗಿದ್ದರೆ ಅದು ಅವರ ಗಮನ ತಪ್ಪಿಸುವುದೆಂಬ ವಿಷಯವನ್ನು ನೀವು ಜ್ಞಾಪಿಸುತ್ತೀರಾ? ತಂದೆ ತಾಯಿ ಮತ್ತು ಮಕ್ಕಳ ಸಮ್ಮುಖದಲ್ಲಿ ನೋಡಲು ಸಂಕೋಚಪಡುವ ಯಾವುದಾದರೂ ದೃಶ್ಯವನ್ನು ಒಂಟಿ ಯಾಗಿರುವಾಗ ನೋಡುತ್ತೀರಾ?

ಇಂಥ ಪ್ರಶ್ನೆಗಳನ್ನು ಸ್ವತಃ ಗಂಭೀರವಾಗಿ ಕೇಳಿ, ಅದಕ್ಕೆ ವಸ್ತುನಿಷ್ಠ ಉತ್ತರ ವನ್ನು ಕಂಡು ಹಿಡಿಯಲು ಪ್ರಯತ್ನಿಸಿದರೆ ಟಿ.ವಿ.ಯ ಕೆಟ್ಟ ಪ್ರಭಾವದಿಂದ ಎಲ್ಲರೂ ಪಾರಾಗಬಹುದು. ಇತರೆಲ್ಲ ಸಂದರ್ಭಗಳಂತೆಯೇ ಟಿ.ವಿ. ನೋಡುತ್ತಿರುವಾಗಲೂ ಅಲ್ಲಾಹನು ನಮ್ಮನ್ನು ನೋಡುತ್ತಿದ್ದಾನೆ, ಗಮನಿಸುತ್ತಿದ್ದಾನೆಂಬ ವಿಷಯವನ್ನು ಮರೆಯಬಾರದು.